ಶ್ರೀರಸ್ತು.

# ನೀತಿಶಾಸ್ತ್ರವೆಂಬ ಸುಭಾಷಿತ ಗ್ರಂಥವು.

ವಂದೆಸತ್ಪುರುಷಾನ್ಲೊಕೆಗುಣಗ್ರಹಣತತ್ಪರಾನ್ । ರಾಜಹಂಸಾನಿವಜಲಾತ್ ಕ್ಷೀರಗ್ರಹಣಕೊವಿದಾನ್ ॥ ॥ ೧ ॥

ಟೀಕಾ ॥ ಲೋಕದಲ್ಲಿ ನೀರುಬೆರಸಿದ ಹಾಲಲ್ಲಿ ಉದಕವನ್ನು ಪ್ರತ್ಯೇಕಿಸಿ, ಹಾಲನ್ನು ಮಾತ್ರ ತೆಗದುಕೊಳ್ಳುವ ರಾಜಹಂಸಗಳೋಪಾದಿ ಗುಣವನ್ನು ತೆಗದುಕೊಳ್ಳುವದರಲ್ಲಿ ತಾತ್ಪರ್ಯವುಳ್ಳ ಸತ್ಪುರುಷರನ್ನು ವಂದಿಸುತ್ತೇನೆ ಎಂದು ಈ ಗ್ರಂಥಕರ್ತನಾದ ಕವಿಯು ಮಂಗಳಾಚರಣೆಯಂ ಮಾಡಿದನು.

ಮೂಲ ॥ ಪ್ರಣಮ್ಯಸರ್ವಲೊಕೆಶಂದೆವದೆವೆಶ್ವರಂಹರಿಂ । ನೀತಿಶಾಸ್ತ್ರಂ ಪ್ರವಕ್ಷ್ಯಾಮಿಸರ್ವಶಾಸ್ತ್ರಾರ್ಥಸಮ್ಮತಂ॥ ॥ಟೀ॥ ಸರ್ವಲೋಕೇಶ್ವರನೂ, ದೇವಾದಿದೇವನೂ ಆದ ಶ್ರೀಮನ್ನಾರಾಯಣನನ್ನು ವಂದಿಸಿ, ಸಕಲ ಶಾಸ್ತ್ರಾರ್ಥ ಸಮ್ಮತವಾದ ನೀತಿಶಾಸ್ತ್ರವಂ ಪೇಳುವೆನು. ॥ ॥ ೨ ॥

ಮೂ ॥ ಧರ್ಮಉವಾಚ—ಸತ್ಯಂಮಾತಾಪಿತಾಜ್ಞಾನಂ ಧರ್ಮೋಭ್ರಾತಾದಯಾಸಖಾ । ಶಾಂತಿಃಪತ್ನೀಕ್ಷಮಾಪುತ್ರಃಷಡ್ಯೆತೆಮಮಭಾಂಧವಾಃ॥ ॥ ಟೀ ॥ ಭಾರತದೊಳು ಧರ್ಮರಾಯನ ವಚನ—ಸತ್ಯವೇ ತಾಯಿ, ಜ್ಞಾನವೇ ತಂದೆ, ಧರ್ಮವೇ ಒಡಹುಟ್ಟಿದವನು, ದಯೆಯೇ ಸ್ನೇಹಿತನು, ಶಾಂತಿಯೇ ಭಾರ್ಯೆಯು, ಕ್ಷಮೆಯೇ ಪುತ್ರನು ಆಗಿ ಈ ಆರ್ವರೇ ಬಂಧುಗಳೆಂದನು. ॥ ೩ ॥

ಮೂ ॥ ಭೀಮಉವಾಚ—ಪ್ರಾಣಂವಾಪಿಪರಿತ್ಯಜ್ಯಮಾನೊರಕ್ಷ್ಯಸ್ಸದಾನೃಭಿಃ । ಅನಿತ್ಯೋಭವತಿಪ್ರಾಣೊಮಾನಆಚಂದ್ರತಾರಕಃ ॥ ॥ಟೀ॥ ಭೀಮನು—ಪ್ರಾಣವನ್ನಾದರೂ ಬಿಟ್ಟು ಮನುಷ್ಯರಿಂದ ಯಾವಾಗ್ಯೂ ಮಾನವೇ ರಕ್ಷಿಸಿಕೊಳ್ಳತಕ್ಕದ್ದು, ಪ್ರಾಣವನಿತ್ಯವು ಮಾನವು ಚಂದ್ರನಕ್ಷತ್ರಗಳಿರುವವರಿಗೂ ಸ್ಥಿರವಾಗಿರ್ಪುದೆಂದನು. ॥ ॥ ೪ ॥

ಮೂ ॥ ಅರ್ಜುನಉವಾಚ—ಆಮಂತ್ರಣೋತ್ಸವಾವಿಪ್ರಾಗಾವೊನವತೃಣೋತ್ಸವಾಃ । ಭರ್ತ್ರಾಗಮೋತ್ಸವಾನಾರ್ಯಸ್ಸೋಹಂ ಕೃಷ್ಣರಣೋತ್ಸವಃ ॥ ಟೀ ॥ ಅರ್ಜುನನು—ಎಲೈ ಕೃಷ್ಣನೇ, ಬ್ರಾಹ್ಮಣರಿಗೆ ಶ್ರಾದ್ಧಭೋಜನವೇ ಉತ್ಸವವು, ಗೋವುಗಳಿಗೆ ಯಳೆಹುಲ್ಲುಗಳೇ ಉತ್ಸವವು, ಮಡದಿಯರಿಗೆ

ಅಗಲಿದ ಗಂಡನ ಬರುವಿಕೆಯೇ ಉತ್ಸವವು, ನನಗಾರೋ ಯುದ್ಧವೇ
ಉತ್ಸವವೆಂದನು. ॥ ॥ ೫ ॥

ಮೂ ॥ ನಕುಲಉವಾಚ—ಮಾತೃವತ್ಪರದಾರಾಂಶ್ಚ ಪರದ್ರವ್ಯಾಣಿಲೋಷ್ಠವತ್ । ಆತ್ಮವತ್ಸರ್ವಭೂತಾನಿಯಃಪಶ್ಯತಿಸಪಶ್ಯತಿ ॥ ॥ಟೀ॥ ನಕುಲನು—ಪರಸ್ತ್ರೀಯರನ್ನು ತಾಯಿಯಂತೆಯೂ, ಪರದ್ರವ್ಯಗಳನ್ನು ಮಣ್ಣಿನ ಗಡ್ಡೆಯಂತೆಯೂ, ಸರ್ವಪ್ರಾಣಿಗಳನ್ನು ತನ್ನಂತೆಯೂ, ಯಾವನು ನೋಡುವನೋ ಅವನೇ ಜ್ಞಾನಿಯಾಗುವನು. ॥ ॥ ೬ ॥

ಮೂ ॥ ಸಹದೇವಉವಾಚ—ಅನಿತ್ಯಾನಿಶರೀರಾಣಿವಿಭವೋನೈವಶಾಶ್ವತಃ। ನಿತ್ಯಂಸನ್ನಿಹಿತೋಮೃತ್ಯುಃಕರ್ತವ್ಯೋಧರ್ಮಸಂಗ್ರಹಃ ॥ ॥ ಟೀ ॥ ಸಹದೇವನು—ಶರೀರಗಳನಿತ್ಯಗಳು, ವಿಭವವು ಸ್ಥಿರವಲ್ಲವು, ಮೃತ್ಯುವು ಸಮೀಪಿಸಿ ಇರುವನು, ಆದದರಿಂದ ಧರ್ಮಸಂಪಾದನೆಯನ್ನೇ ಮಾಡಬೇಕೆಂದನು. ॥೭॥

ಮೂ ॥ ದ್ರೌಪದ್ಯುವಾಚ—ಸುಂದರಂಪುರುಷಂದೃಷ್ಟ್ವಾಭ್ರಾತರಂಪಿ
ತರಂಸುತಂ । ಯೋನಿರ್ದ್ರವತಿನಾರೀಣಾಂತಥ್ಯಂಮೆಬ್ರೂಹಿಕೇಶವ ॥
ಟೀ ॥ ದ್ರೌಪದಿಯು—ಎಲೈ ಕೇಶವನೇ, ಒಡಹುಟ್ಟಿದವನಾಗಲಿ, ತಂದೆಯನ್ನಾಗಲಿ, ಮಗನನ್ನಾಗಲಿ, ರೂಪವಂತನಾದ ಪುರುಷನನ್ನು ನೋಡಿದರೆ, ಹೆಂಗುಸರಿಗೆ ಚಿತ್ತವಿಕಾರ ಉಂಟಾಗುವದು, ಇದು ನನ್ನ ತಾತ್ಪರ್ಯ—ನೀನು ಸತ್ಯವನ್ನು ಹೇಳೆಂದಳು. ॥ ॥ ೮ ॥

ಮೂ ॥ ಪಂಚಮೆಪತಯಸ್ಸಂತಿಮಹ್ಯಂಷಷ್ಠೋಪಿರೋಚತೇ । ಪುರುಷಾಣಾಮಭಾವೇನಸರ್ವಾನಾರ್ಯಃಪ್ರತಿವ್ರತಾ ॥ ॥ಟೀ॥ ಮತ್ತು ನನಗೆ ಐವರು ಪತಿಗಳಿಹರು, ಆರನೇ ಪತಿಯನ್ನು ಅಪೇಕ್ಷಿಸುವೆನು. ಇದರಿಂದಿಷ್ಟವಾದ ಪುರುಷರು ದೊರೆಯದ್ದರಿಂದಲೇ ಸರ್ವಸ್ತ್ರೀಗಳೂ ಪ್ರತಿವ್ರತೆಯಾಗಿಹರೆಂದಳು.

ಮೂ ॥ ಶ್ರೀಕೃಷ್ಣಉವಾಚ—ಔದುಂಬರಾಣಿಪುಷ್ಪಾಣಿಶ್ವೇತವರ್ಣಂಚವಾಯಸಂ । ಮತ್ಸ್ಯಪಾದಂಜಲೇಪಶ್ಯೇನ್ನನಾರೀಹೃದಯಸ್ಥಿತಂ ॥ ॥ಟೀ॥ ಕೃಷ ನು—ಅತ್ತಿಯ ಹುವ್ವುಗಳನ್ನು, ಬಿಳೀ ಕಾಗಿಯನ್ನು, ನೀರೊಳು ಮೀನಿನ ಕಾಲನ್ನು ಸಹ ನೋಡಿದರೂ, ಸ್ತ್ರೀಯರ ಮನೋಗತವಂ ತಿಳಿಯಲಾಗದೆಂದನು. ॥ ॥ ೧೦ ॥

ಮೂ ॥ ದುರ್ಭಿಕ್ಷೇಚಾನ್ನದಾತಾರಂಸುಭಿಕ್ಷೇಚಹಿರಣ್ಯದಂ । ಚತುರೋಹಂನಪಶ್ಯಾಮಿರಣೇಧೀರಮೃಣೇಶುಚಿಂ ॥ ॥ ಟೀ ॥ ಮತ್ತು ದುರ್ಭಿಕ್ಷಕಾಲದಲ್ಲಿ ಅನ್ನದಾನ ಮಾಡುವವನನ್ನೂ, ಸುಭಿಕ್ಷದಲ್ಲಿ ಧನವನ್ನೀಯುವವನನ್ನೂ ಯುದ್ಧ,

ದೊಳು ಧೈರ್ಯವುಳ್ಳವನನ್ನೂ, ಸಾಲಾ ಮಾಡುವದರಲ್ಲಿ ಪರವಂಚನೆ ಇಲ್ಲದವ ನನ್ನೂ, (ಪಾಠಾಂತರ) ಹುಣ್ಣು ಬಂದಲ್ಲಿ ಪರಿಶುದ್ಧನಾಗಿ ಇರುವವನನ್ನು, ಈ ನಾಲ್ವರನ್ನು ನಾನು ನೋಡಿದ್ದಿಲ್ಲವೆಂದನು. ಅಂದರೆ, ಇಂಥಾ ಉತ್ತಮರು ದುರ್ಲಭರೆಂದು ತಾತ್ಪರ್ಯವು. || || ೧೧ ||

ಮೂ || ಕರ್ಣಉವಾಚ—ವಿಪ್ರಹಸ್ತೆ ಧನಂದದ್ಯಾತ್ಸ್ವ ಭಾರ್ಯಾಸುಚಯು ವ್ವನಂ | ಸ್ವಾಮಿಕಾರ್ಯೆಷುಚಪ್ರಾಣಂನಿಶ್ಚಯೊಮಮಮಾಧವ || || ಟೀ || ಕರ್ನನು—ಎಲೈ ಮಾಧವನೇ, ಬ್ರಾಹ್ಮಣರ ಕೈಯಲ್ಲಿ ಧನವಂನಿಯ್ಯಬೇಕು, ತನ್ನ ಭಾರ್ಯೆಯರಲ್ಲಿ ಯುವ್ವನವನ್ನರ್ಪಿಸಬೇಕು, ಸ್ವಾಮಿ ಕಾರ್ಯಕ್ಕಾಗಿ ತನ್ನ ಪ್ರಾಣವಂ ಬಿಡಬೇಕು, ಇದೇ ನನ್ನ ನಿಶ್ಚಯುವೆಂದನು || || ೧೨ ||

ಮೂ || ಸರ್ವಸ್ಯಗಾತ್ರಸ್ಯಶಿರಃಪ್ರಧಾನಂ ಸರ್ವೆಂದ್ರಿಯಾಣಾಂನಯನಂ ಪ್ರಧಾನಂ | ಷಣ್ಣಾಂರಸಾನಾಂಲವಣಂ ಪ್ರಧಾನಂಭವೆನ್ನದೀನಾಮುದಕಂ ಪ್ರಧಾನಂ || || ಟೀ || ಶರೀರದೊಳು ಶಿರಸ್ಸು ಪ್ರಧಾನವು, ಇಂದ್ರಿಯಾಗ ಳೊಳು ಕಣ್ಣೇ ಮುಖ್ಯವು, ರಸಗಳೊಳು ಲವಣವೇ ಶ್ರೇಷ್ಠವು, ನದಿಗಳೊ ಳು ಉದಕವೇ ಶ್ರೇಷ್ಠವು || ||೧೩||

ಮೂ|| ಮೃತ್ಪಿಂಡಏಕೊಬಹುಭಾಂಡರೂಪಸ್ಸುವರ್ಣಮೆಕಂಬಹುಭೂಷ ಣಾತ್ಮ | ಗೋಕ್ಷೀರಮೆಕಂಬಹುಧೆನುಜಾತಮೆಕಃಪರಾತ್ಮಾಬಹುದೆಹವರ್ತೀ|| ಟೀ|| ಮಣ್ಣು ನಾನಾವಿಧ ಭಾಂಡಗಳಾಗುವಂತೆಯೂ, ಸುವರ್ಣವು ಬಹು ಭೂಷಣವಾಗುವಂತೆಯೂ, ಗೋವಿನ ಹಾಲು ಮೊಸರು, ಮಜ್ಜಿಗೆ, ಬೆಂಣೇ ಮುಂತಾದ ನಾನಾವಿಧ ರಸಗಳಾಗುವಂತೆಯೂ, ಪರಮಾತ್ಮನೊಬ್ಬನು ಜೀ ವಾತ್ಮಗಳೊಂದಿಗೆ ಕಲಿತು ಸರ್ವ ದೇಹಗಳಲ್ಲಿಯೂ ಪ್ರವರ್ತಿಸುವನು||೧೪||

ಮೂ || ಅರ್ಥಾತುರಾಣಾಂನಗುರುರ್ನಬಂಧುಃಕಾಮಾತುರಾಣಾಂನಭ ಯಂನಲಜ್ಜಾ | ವಿದ್ಯಾತುರಾಣಾಂನಸುಖಂನನಿದ್ರಾಕ್ಷುಧಾತುರಾಣಾಂನರು ಚಿರ್ನಪಕ್ವಂ || || ಟೀ || ಧನದಾಶೆಗೊಂಡವರಿಗೆ ಗುರು ಬಂಧುಗಳಿಲ್ಲವು, ಕಾಮಾತುರರಿಗೆ ಭಯವೂ ಲಜ್ಜೆಯೂ ಇಲ್ಲವು, ವಿದ್ಯೆಯನ್ನಪೇಕ್ಷಿಸಿದವರಿಗೆ ಸುಖವು ನಿದ್ರೆಯೂ ಇಲ್ಲವು, ಹಸಿವುಗೊಂಡವರಿಗೆ ರುಚಿ ಪಕ್ವಗಳಿಲ್ಲವು.

ಮೂ || ದಾತಾದರಿದ್ರಃಕೃಪಣೊಧನಾಢ್ಯಃಪಾಪೀಚಿರಾಯುಸ್ಸುಕೃತೀಗ ತಾಯುಃ | ರಾಜಾಕುಲೀನಸ್ಸುಕುಲೀನಸೆವ್ಯಃ ಕಲೌಯುಗೆಷಡ್ಗುಣಮಾಶ್ರ ಯಂತಿ || || ಟೀ || ಕಲಿಕಾಲದೊಳು ದಾತನು ದರಿದ್ರನಾಗುವನು, ಕೃಪ ಣನು ಧನಪೂರ್ಣನಾಗುವನು, ಪಾಪಿಷ್ಠನು ದೀರ್ಘಾಯುವಾಗುವನು, ಪು

ಶ್ರೈಶೀಲನು ಅಲ್ಪಾಯುವಾಗುವನು, ನೀಚಕುಲದವನು ಅರಸಾಗುವನು, ಸತ್ಕುಲದವನು ಸೇವಕನಾಗುವನು ಹೀಗೆ ಗುಣ ವಿಪರ್ಯಾಸವುಂಟಾಗುವದು.

ಮೂ || ಭಾರ್ಯಾವಿಯೋಗಸ್ಸ್ವಜನಾಪವಾದ ಋಣಸ್ಯಶೇಷಃಕುಜನಸ್ಯಸೇವಾ | ದಾರಿದ್ರ್ಯಕಾಲೇಪ್ರಿಯದರ್ಶನಂಚವಿನಾಗ್ನಿನಾಪಂಚದಹಂತಿಕಾಯಂ || ಟೀ || ಭಾರ್ಯೆಯನ್ನಗಲುವಿಕೆಯು, ಸತ್ಪುರುಷರಲ್ಲಿ ಅಪವಾದವನ್ನ ಹೊರುವಿಕೆಯು ಋಣ ಶೇಷವು, ನೀಚಕುಲದವನ ಸೇವೆಯು, ದಾರಿದ್ರಕಾಲದೊಳು ಇಷ್ಟರನ್ನೋಡುವಿಕೆಯು, ಈ ಐದು ಬೆಂಕಿ ಇಲ್ಲದೇಯೆ ದೇಹವನ್ನ ಸುಡುತ್ತಲಿವೆ || || ೧೭ ||

ಮೂ || ಪುಸ್ತಕಂವನಿತಾವಿತ್ತಂಪರಹಸ್ತಂಗತಂಗತಂ | ಅಥವಾಪುನರಾಯಾತಂಜೀರ್ಣಂಭ್ರಷ್ಟಾಚಖಂಡಶಃ|| ||ಟೀ|| ಪುಸ್ತಕವು, ಸ್ತ್ರೀಯು, ಧನವು, ಈ ಮೂರು ಅನ್ಯರ ಕೈಗೆ ಶಿಕ್ಕಿದರೆ ತಿರಿಗಿ ಬರಲಾರವು. ಅಥವಾ ಒಂದು ವೇಳೆ ಬಂದರೂ ಜೀರ್ಣವಾಗಿಯೂ, ಭ್ರಷ್ಟವಾಗಿಯೂ, ಖಂಡಖಂಡವಾಗಿಯೂ, ಬರುವವು. ಅಂದರೆ, ಪುಸ್ತಕವು ಹರಿದು ಮುರಿದು ಹೋಗುವದು, ಸ್ತ್ರೀಯು ಕೆಟ್ಟು ಹೋಗುವಳು, ಧನವು ಸ್ವಲ್ಪಸ್ವಲ್ಪವಾಗಿ ಬರುವದೆಂದು ಭಾವವು || || ೧೮ ||

ಮೂ || ಆಯುರ್ವಿತ್ತಂಗೃಹಚ್ಛಿದ್ರಂಮಂತ್ರೌಷಧಸಮಾಗಮಾಃ | ದಾನಮಾನಾವಮಾನಾಶ್ಚ ನವಗೋಪ್ಯಾಮನೀಷಿಭಿಃ|| || ಟೀ || ಆಯುಸ್ಸು, ಧನ, ಗೃಹಚ್ಛಿದ್ರ, ಮಂತ್ರ, ಔಷಧ, ಸಂಗಮ, ದಾನ, ಮಾನ, ಅಪಮಾನವೆಂದು ಈ ಒಂಭತ್ತನ್ನೂ ಬುದ್ಧಿವಂತರು ಮುಚ್ಚಿಡಬೇಕು || || ೧೯ ||

ಮೂ || ಋಣಾನುಬಂಧರೂಪೇಣಪಶುಪತ್ನಿಸುತಾಲಯಾಃ | ಋಣಕ್ಷಯೇಕ್ಷಯಂಯಾಂತಿಕಾತತ್ರಪರಿವೇದನಾ || || ಟೀ || ಜನ್ಮಾಂತರ ಋಣಶೇಷದಿಂದ ಪಶು, ಭಾರ್ಯೆ, ಮಕ್ಕಳು, ಮನೆಗಳು ಮುಂತಾದ ವಿಷಯುಗಳಿಹವು. ಅಂತಾ ಋಣವು ಕಳೆಯಲೂ ಅವು ಕಳೆದು ಹೋಗುತ್ತವೆಯಾಗಿ ಅವುಗಳ ನಾಶಕ್ಕೋಸ್ಕರ ದುಃಖಿಸಲಾಗದು || || ೨೦ ||

ಮೂ|| ದೂಷಕಶ್ಚಕ್ರಿಯಾಶೂನ್ಯೋನಿಕೃಷ್ಟೋದೀರ್ಘಕೋಪನಃ | ಚತ್ವಾರಃಕರ್ಮಚಂಡಾಲಾಜಾತಿಚಂಡಾಲಉತ್ತಮಃ || || ಟೀ || ಅನ್ಯರನ್ನ ದೂಷಿಸುವವನು, ವರ್ಣಾಶ್ರಮ ಧರ್ಮಗಳನ್ನು ಬಿಡುವವನು, ನೀಚವೃತ್ತಿಯುಳ್ಳವನು, ದೀರ್ಘಕೋಪಯುಕ್ತವನು, ಈ ನಾಲ್ವರೂ ಕರ್ಮಚಂಡಾಲರೆನ್ನಿಶಿಕೊಳ್ಳುವರು, ಇವರುಗಳಿಗಿಂತಲೂ ಜಾತಿಚಂಡಾಲನು ಉತ್ತಮನು || ೨೧ ||

ಮೂ || ರಾಜವತ್ಪಂಚವರ್ಷಾಣಿದಶವರ್ಷಾಣಿದಾಸವತ್ | ಪ್ರಾಪ್ತೇತು ಷೋಡಶೇವರ್ಷೇಪುತ್ರಮ್ಮಿತ್ರವದಾಚರೇತ್ || || ಟೀ || ಹುಟ್ಟಿದ ಮಗನನ್ನು ಐದು ವರುಷಗಳವರಿವಿಗೂ ರಾಜನಂತೆ ಉಪಚರಿಸಬೇಕು. ಅನಂತರ ಹತ್ತು ವರುಷಗಳವರಿಗೂ ಸೇವಕನಂತೆ ಆಳಬೇಕು. ಹದಿನಾರನೇ ವರುಷ ಬಂದರೆ ಸ್ನೇಹಿತನಂತೆಯೇ ಭಾವಿಸಬೇಕು || || ೨೦ ||

ಮೂ|| ಏಕೈಕೋಗೌಸ್ತ್ರಿಯುಸ್ಸಿಂಹಾಃಪಂಚವ್ಯಾಘ್ರಾಃಪ್ರಸೂತಿಭಿಃ| ಅಧರ್ಮ್ಯೋನಷ್ಟಸಂತಾನೋಧರ್ಮಸ್ಸಂತಾನವರ್ಧನಃ || || ಟೀ || ಪರೋಪಕಾರಿಯಾದ ಗೋವು ಒಂದು ಮರಿಯನ್ನು ಈನುತ್ತದೆ. ಪರಹಿಂಸಕವಾದ ಸಿಹ್ಮವು ಮೂರು ಮರಿಗಳನ್ನು ಈನುತ್ತದೆ. ಹುಲಿಯು ಐದು ಮರಿಗಳನ್ನು ಈನುತ್ತದೆ. ಆದರೂ ಧರ್ಮವುಳ್ಳ ಗೋವಿನ ಸಂತತಿಯು ಸ್ವಲ್ಪವಾಗಿ ಇದ್ದರೂ ವೃದ್ಧಿ ಹೊಂದುತ್ತದೆ. ಅಧರ್ಮವುಳ್ಳ ಕ್ರೂರ ಜಂತುಗಳ ಸಂತತಿಯು ಅಧಿಕವಾಗಿದ್ದರೂ ನಾಶಹೊಂದುತ್ತದೆ. ಆದದರಿಂದ ಧರ್ಮವೇ ಸಂತತಿ ವೃದ್ಧಿಗೆ ಕಾರಣವೆಂದು ತಿಳಿಯಬೇಕು || || ೨೫ ||

ಮೂ || ಬಾಲಾರ್ಕಃಪ್ರೇತಧೂಮಶ್ಚವೃದ್ಧಸ್ತ್ರೀಪಲ್ವಲೋದಕಂ | ರಾತ್ರೌದಧ್ಯನ್ನಭುಕ್ತಿಶ್ಚಆಯುಃಕ್ಷೀಣಂದಿನೇದಿನೇ || || ಟೀ || ಎಳೆ ಬಿಸಲು, ಹೆಣದ ಹೊಗೆಯು, ಮುದಿ ಹೆಂಗುಸು, ಕೊಳತ ಹಳ್ಳದ ನೀರು, ಇರುಳು ಮೊಸರೋಗರ ಭೋಜನವು ಇವುಗಳನ್ನು ಸೇವಿಸುವವರಿಗೆ ದಿನದಿನವೂ ಆಯುಸ್ಸು ಕ್ಷಯಿಸವದು || || ೨೪ ||

ಮೂ || ವೃದ್ಧಾರ್ಕೋಹೋಮಧೂಮಶ್ಚಬಾಲಸ್ತ್ರೀನಿರ್ಮಲೋದಕಂ | ರಾತ್ರೌಕ್ಷೀರಾನ್ನಭುಕ್ತಿಶ್ಚಆಯುರ್ವೃದ್ಧಿರ್ದಿನೇದಿನೇ || ||ಟೀ|| ಸಂಜೆಯ ಬಿಸಲು, ಹೋಮದ ಹೊಗೆಯು, ಯಳೆ ಪ್ರಾಯವುಳ್ಳ ಹೆಂಗುಸು, ನಿರ್ಮಲವಾದ ಉದಕವು, ರಾತ್ರಿಯೊಳು ಹಾಲೋಗರವು ಇವುಗಳನ್ನು ಸೇವಿಸುವವರಿಗೆ (ಪಾ. ಸತ್ಕರ್ಮದಿಂದಲೂ) ಆಯುಸ್ಸು ವೃದ್ಧಿ ಹೊಂದುವದು|| || ೨೫ ||

ಮೂ || ಉತ್ತಮಂಸ್ವಾರ್ಜಿತಂದ್ರವ್ಯಂಮಧ್ಯಮಂಪಿತುರಾರ್ಜಿತಂ | ಅಧಮಂಭ್ರಾತೃವಿತ್ತಂತುಸ್ತ್ರೀವಿತ್ತಮಧಮಾಧಮಂ || || ಟೀ || ಮನುಷ್ಯನಿಗೆ ತನ್ನಿಂದ ಸಂಪಾದಿಸಲ್ಪಟ್ಟ ಧನ ಉತ್ತಮವು, ಪಿತ್ರಾರ್ಜಿತ ಮಧ್ಯಮವು, ಅಣ್ಣ ತಮ್ಮಂದಿರ ಧನ ಅಧಮವು, ಸ್ತ್ರೀಯರ ಧನ ಅಧಮಾಧಮವು ||೨೬||

ಮೂ || ಉತ್ತಮಾವಿದ್ಯಯಾವೃತ್ತಿರ್ಮಧ್ಯಮಾಕೃಷಿವಾರ್ತಯಾ| ಅಧಮಾ ಸೇವಯಾವೃತ್ತಿರ್ಮೃತಿಶ್ಚೌರ್ಯೇಣಜೀವನಂ || ಟೀ || ವಿದ್ಯಾಮೂಲಕವಾದ

ಜೀವನ ವೃತ್ತವು, ಕೃಷಿವಾಣಿಜ್ಯಗಳಿಂದ ಜೀವನವು ಮಧ್ಯಮ, ಸೇವಾವೃತ್ತಿ ಅಧಮ, ಕಳ್ಳತನದಿಂ ಜೀವನವು ಮರಣರೂಪವಾಗುವದು ॥ ೨೭ ॥

ಮೂ ॥ ಉತ್ತಮೆಸ್ಯಾತ್ ಕ್ಷಣಂಕೋಪಃಮಧ್ಯಮೆಘಟಿಕಾದ್ವಯಂ । ಅಧಮೆಸ್ಯಾದಹೋರಾತ್ರಂಪಾಪಿಷ್ಠೆಮರಣಾಂತಕಃ॥ ॥ಟೀ॥ ಉತ್ತಮನಿಗೆ ಬಂದ ಕೋಪ ಕ್ಷಣಮಾತ್ರವಿರುವದು. ಮಧ್ಯಮನಿಗೆರಡುಘಳಿಗೆ ಇರುವದು, ಅಧಮನಲ್ಲಿ ಅಹೋರಾತ್ರವಿರುವದು, ಮಹಾ ಪಾಪಿಷ್ಠನ ಕೋಪವು ಸಾಯುವವರಿವಿಗೂ ಮಾಣದು ॥ ॥ ೨೮ ॥

ಮೂ ॥ ಆತ್ಮಬುದ್ಧಿಸ್ಸುಖಾಯುಸ್ಯಾದ್ಗುರುಬುದ್ಧಿರ್ವಿಶೇಷತಃ । ಪರಬುದ್ಧಿರ್ವಿನಾಶಾಯುಸ್ತ್ರೀಬುದ್ಧಿಃಪ್ರಳಯಾಯುಚ ॥ ॥ಟೀ॥ ಮನುಷ್ಯನಿಗೆ ಸ್ವಬುದ್ಧಿಯು ಸುಖಪ್ರಯೋಜಕವಹುದು, ಹಿರಿಯರ ಬುದ್ಧಿಯು ಅತ್ಯಂತಸುಖಕರವಹುದು, ಅನ್ಯರ ಬುದ್ಧಿಯು ನಾಶಹೇತುವಹುದು, ಸ್ತ್ರೀಬುದ್ಧಿಯು ಸರ್ವನಾಶಕರವಹುದು—ಅಂದರ, ಮನುಷ್ಯನು ತಂನಮನಸ್ಸಿನಲ್ಲಿ ತೋಚಿದ ವಿಷಯವನ್ನು ಹಿರಿಯರಿಗೆ ತಿಳುಹಿ, ಅವರ ಅನುಮತಿಯಿಂದ ಮಾಡಬೇಕಲ್ಲದೆ ಅನ್ಯರ ಮಾತನ್ನು ಹೆಂಗಸರ ಆಲೋಚನೆಯನ್ನು ಸಹ ತೆಗದುಕೊಳ್ಳಕೂಡದೆಂದು ಭಾವವು ॥ ॥ ೨೯ ॥

ಮೂ ॥ ಅತಿಥಾತಿಷ್ಠತಿದ್ವಾರಿಯೊಭುಙ್ತೆನ್ನಂವಿಹಾಯತಂ । ಗೋಮಾಂಸಸಮಮನ್ನಂತತ್ಸಚಂಡಾಲಸಮೊನರಃ॥ ॥ ಟೀ ॥ ಅತಿಥಿಯಾಗಿ ಅನ್ನವನ್ನಪೇಕ್ಷಿಸಿ ಬಂದವನು ಬಾಗಿಲಲ್ಲಿ ಕಾದಿರುವಾಗ ಅವನಂ ಬಿಟ್ಟು ಮನೆಯೊಳು ಅನ್ನವನ್ನುಂಣುವನು ಚಂಡಾಲ ಸಮಾನನಾಗುವನು, ಆ ಅನ್ನವು ಗೋಮಾಂಸ ಸಮಾನವಾಗುವದು ॥ ॥ ೩೦ ॥

ಮೂ॥ ದರ್ಶನಾಚ್ಚಿತ್ತವೈಕಲ್ಯಂಸ್ಪರ್ಶನಾತ್ತುಧನಕ್ಷಯಃ । ಸಂಗಮಾತ್ಕಿಲ್ಬಿಷಂಪಣ್ಯಸ್ತ್ರೀಣಾಂಪ್ರತ್ಯಕ್ಷರಾಕ್ಷಸಾಂ॥ ॥ಟೀ॥ ಪ್ರತ್ಯಕ್ಷ ರಾಕ್ಷಸಿಯರಾದ ಸೂಳೆಯರ ದರ್ಶನದಿಂ ಮನ ಮರುಳಾಗುವದು, ಮುಟ್ಟುವದರಿಂದ ಧನಕ್ಷಯವಹುದು, ಸಂಭೋಗದಿಂ ಪಾಪ ಸಂಘಟನವಹುದು. ॥೩೧॥

ಮೂ ॥ ದಾಸೀಮಾನಂಹಂತಿಪುಂಸ್ಯಾವಿಧವಾಯುಷ್ಯನಾಶನೀ । ವೇಶ್ಯಾಮಾನಧನಂಹಂತಿಸರ್ವಂಹಂತಿಪರಾಂಗನಾ ॥ ॥ ಟೀ ॥ ಪುರುಷರಿಗೆ ದಾಸಿಯು ಮಾನವಂ ಕೆಡಿಸುವಳು, ಮುಂಡೆಯು ಆಯುಷ್ಯವಂ ಹರಿಸುವಳು, ಸೂಳೆಯು ಮಾನವನ್ನೂ ಧನವನ್ನೂ ಸಹ ಕೆಡಿಸುವಳು, ಪರಹೆಂಗಸು ಸರ್ವನಾಶವನ್ನುಂಟುಮಾಡುವಳು, ಆದದರಿಂದ ಇವರ ಸಂಭೋಗವಂ ಮಾಡಬಾರದೆಂದು ಭಾವವು ॥ ॥ ೩೨ ॥

ಮೂ|| ದುರ್ಜನಂಕಾಂಚನಂಭೇರೀಂದುಷ್ಟಾಶ್ವಂದುಷ್ಟಯೋಷಿತಂ| ಇಕ್ಷುದಂಡಾನ್ತಿಲಾನ್ಶೂದ್ರಾಂ ಮರ್ದಯೇದ್ಗುಣವೃದ್ಧಯೇ || || ಟೀ || ದುರ್ಜನನನ್ನು, ಬಂಗಾರವನ್ನು, ಭೇರಿಯನ್ನು, ದುಷ್ಟವಾದ ಕುದರೆಯನ್ನು, ದುಷ್ಟಳಾದ ಹೆಂಗಸನ್ನು, ಕಬ್ಬನ್ನು, ಯೆಳ್ಳನ್ನು, ಶೂದ್ರನನ್ನು ಮರ್ದಿಸಿದರೆ, ಗುಣವೃದ್ಧಿಯಹುದು || || ೩೩ ||

ಮೂ || ನಗಚ್ಛೇದ್ರಾಜಯುಗ್ಮಂತುನಗಚ್ಛೇದ್ಬ್ರಾಹ್ಮಣತ್ರಯಂ | ಚತುಶ್ಶೂದ್ರಾನ್ನಗಚ್ಛೇಯುನಗಚ್ಛೇದ್ವೈಶ್ಯಪಂಚಕಂ|| ||ಟೀ|| ಒಂದು ಕೆಲಸಕ್ಕೆ ಇಬ್ಬರು ಅರಸರು ಹೋಗಕೂಡದು, ಮೂವ್ವರು ಬ್ರಾಹ್ಮರು ಹೋಗಲಾಗದು, ನಾಲುವರು ಶೂದ್ರರು ಹೋಗಕೂಡದು, ಐವರು ವೈಶ್ಯರು ಹೋಗಲಾಗದು || - || || ೩೪ ||

ಮೂ|| ಉಷಶ್ಶಂಸಗಾರ್ಗ್ಯಸ್ತುಶಕುನಂತುಬೃಹಸ್ಪತಿಃ | ಮನೋಜಯಂತುಮಾಂಡವ್ಯಃವಿಪ್ರವಾಕ್ಯಂಜನಾರ್ದನಃ || ||ಟೀ|| ಪ್ರಯಾಣಕ್ಕೆ ಪ್ರಾತಃಕಾಲವೇ ಶ್ರೇಷ್ಠವೆಂದು ಗಾರ್ಗ್ಯಋಷಿಯು ನುಡಿದನು, ಶಕುನವನ್ನು ಬೃಹಸ್ಪತಿ ಕೊಂಡಾಡಿದನು, ಮಾಂಡವ್ಯನು ಮನೋಜಯವನ್ನು ನುಡಿದನು, ಬ್ರಾಹ್ಮಣರ ಅನುಮತಿ ವಾಕ್ಯವೇ ಶ್ರೇಷ್ಠವೆಂದು ಜನಾರ್ದನನು ನುಡಿದನು, (ಪಾಠಾಂತರ–ವಿಪ್ರವಾಕ್ಯೋಜನಾರ್ದನಃ) ಅಂದರೆ, ಬ್ರಾಹ್ಮಣರ ವಾಕ್ಯವೇ ದೇವರ ವಾಕ್ಯವೆಂದು ಭಾವವು || || ೩೫ ||

ಮೂ || ಶರ್ವರೀದೀಪಕಶ್ಚಂದ್ರೋದಿವಸೋದ್ದೀಪಕೋರವಿಃ | ತ್ರೈಲೋಕ್ಯದೀಪಕೋಧರ್ಮಸ್ಸುಪುತ್ರಃಕುಲದೀಪಕಃ || || ಟೀ || ಚಂದ್ರನು ರಾತ್ರಿಗೆ ಪ್ರಕಾಶವನ್ನುಂಟು ಮಾಡುವನು, ಸೂರ್ಯನು ಹಗಲಿಗೆ ಪ್ರಕಾಶಕರನು, ಧರ್ಮವು ತ್ರಿಲೋಕಕ್ಕೂ ಪ್ರಕಾಶವು, ಯೋಗ್ಯನಾದ ಪುತ್ರನು ಕುಲಕ್ಕೆ ಪ್ರಕಾಶಕರನು || || ೩೬ ||

ಮೂ || ಸಬಂಧುರ್ಯೋಹಿತೇಪ್ಸುಸ್ಸ್ಯಾತ್ಸಪಿತಾಯಸ್ತುಪೋಷಕಃ | ಸಸಖಾಯತ್ರವಿಶ್ವಾಸಸ್ಸಾಭಾರ್ಯಾಯತ್ರನಿರ್ವೃತಿಃ || || ಟೀ || ಯಾವನು ಹಿತಚಿಂತಕನೋ ಅವನೇ ಬಂಧು, ಯಾವನು ಪೋಷಿಸುತ್ತಾನೋ ಅವನೇ ತಂದೆಯು, ಯಾವನಲ್ಲಿ ನಂಬಿಕೆಯುಂಟಾಗುತ್ತದೋ ಅವನೇ ಮಿತ್ರನು, ಯಾವಳಿಂದ ನೆಮ್ಮದಿಯುಂಟಾಗುತ್ತದೋ ಅವಳೇ ಭಾರ್ಯೆಯು|| || ೩೭ ||

ಮೂ|| ಅರ್ಥಾನಾಮಾರ್ಜನಂದುಃಖಮಾರ್ಜಿತಾನಾಂಚರಕ್ಷಣಂ | ನಾಶೇದುಃಖಂವ್ಯಯೇದುಃಖಮರ್ಥೋದುಃಖಸ್ಯಭಾಜನಂ || ||ಟೀ|| ಧನಸಂಪಾದ

ನವು ದುಃಖವು, ಅದರ ರಕ್ಷಣವು ದುಃಖವು, ಅದು ನಷ್ಟವಾದರು ದುಃಖವು, ಅದರ ವ್ರಯವೂ ದುಃಖವು, ಆದದರಿಂದ ಅರ್ಥವೆಂಬುವದು ದುಃಖಮಯ ವಾಗಿರ್ಪುದು || || ೩೮ ||

ಮೂ || ಹರಿಣಾಪಿಹರಣಾಪಿಬ್ರಹ್ಮಣಾಪಿಸುರೈರಪಿ | ಲಲಾಟಲಿಖಿತಾರೇಖಾಪರಿಮಾರ್ಷ್ಟುಂನಶಕ್ಯತೆ || || ಟೀ || ಹರಿಯಿಂದಲೂ, ಹರನಿಂದಲೂ, ಬ್ರಹ್ಮನಿಂದಲೂ, ದೇವರುಗಳಿಂದಲೂ, ಮನುಷ್ಯನ ಹಣೆಯ ಬರಹವು ತಪ್ಪಿಸಲಶಕ್ಯವು || || ೩೯ ||

ಮೂ || ಘೃತೆನವರ್ಧತೆಬುದ್ಧಿಕ್ಷೀರಮಾಯುಷ್ಯವರ್ಧನಂ | ಶಾಕೆನವರ್ಧತೆವ್ಯಾಧಿರ್ಮಾಂಸಂಮಾಂಸೆನವರ್ಧತೆ|| ||ಟೀ|| ತುಪ್ಪದಿಂ ಬುದ್ಧಿ ಹೆಚ್ಚುವದು, ಹಾಲಿನಿಂದ ಆಯುಸ್ಸು ಹೆಚ್ಚುವದು, ಕಾಯುಪಲ್ಯಗಳಿಂದ ರೋಗ ಹೆಚ್ಚುತ್ತದೆ. ಮಾಂಸದಿಂ ಮಾಂಸ ಹೆಚ್ಚುವದು || || ೪೦ ||

ಮೂ|| ಅಸಂತುಷ್ಟೋದ್ವಿಜೊನಷ್ಟಸ್ಸಂತುಷ್ಟಇವಪಾರ್ಥಿವಃ | ಸಲಜ್ಜಾಗಣಿಕಾನಷ್ಟಾನಿರ್ಲಜ್ಜೇವಕುಲಾಂಗನಾ || ||ಟೀ|| ತೃಪ್ತಿ ಹೊಂದಿದ ಅರಸನಂತೆ ತೃಪ್ತಿ ಇಲ್ಲದ ಬ್ರಾಹ್ಮಣನು ಕೆಡುವನು. ನಾಚಿಗೆ ಇಲ್ಲದ ಗರಿತಿಯಂತೆ ನಾಚಿಗೆ ಕೊಳ್ಳುವ ಸೂಳೆ ಕೆಡುವಳು || || ೪೧ ||

ಮೂ|| ವೇದಮೂಲಮಿದಂಬ್ರಾಹ್ಮ್ಯಂಭಾರ್ಯಾಮೂಲಮಿದಂಗೃಹಂ | ಕೃಷಿಮೂಲಮಿದಂಧಾನ್ಯಂಧನಮೂಲಮಿದಂಜಗತ್ || || ಟೀ || ಬ್ರಾಹ್ಮಣ್ಯಕ್ಕೆ ವೇದವು ಮೂಲವು, ಗೃಹಸ್ತಾಶ್ರಮಕ್ಕೆ ಭಾರ್ಯೆಯೇ ಮೂಲವು, ಧಾನ್ಯಕ್ಕೆ ಕೃಷಿಯೇ ಮೂಲವು, ಲೊಕಕ್ಕೆ ಧನವೇ ಮೂಲವು || ೪೨ ||

ಮೂ|| ಶಿಲಾಸ್ಥಗಂಧಲೇಪಶ್ಚಮಾರ್ಜಾರೋಚ್ಛಿಷ್ಟಭೋಜನಂ | ಪ್ರತಿಬಿಂಬೇಕ್ಷಣಂನೀರೇಶಕ್ರಸ್ಯಾಪಿಶ್ರಿಯಂಹರೇತ್|| ||ಟೀ|| ಕಲ್ಲಿನ ಮೇಲಿಂದ ಗಂಧವ ಹೆಚ್ಚುವದು, ಬೆಕ್ಕು ಬಾಯಿಟ್ಟ ಅನ್ನವನ್ನುಂಣುವದು, ನೀರೊಳು ತನ್ನ ನೆರಳಂ ನೋಡುವದು, ಇವೆಲ್ಲವೂ ಇಂದ್ರನ ಸಂಪತ್ತನ್ನು ಸಹ ಹರಿಸುವದು.

ಮೂ|| ಅಜಾರಜಃಖರರಜಃಸ್ತ್ರೀಣಾಂಪಾದರಜಸ್ತಥಾ | ಸಮ್ಮಾರ್ಜನೀರಜಶ್ಚಾಪಿಶಕ್ರಸ್ಯಾಪಿಶ್ರಿಯಂಹರೇತ್|| ||ಟೀ|| ಕುರಿಗಳು, ಕತ್ತೆಯು, ಹೆಂಗಸರು ಇವುಗಳ ಕಾಲುಗಳಿಂದ ಎದ್ದ ಧೂಳಿಯೂ ಕಸಬರಲಿಂದೆದ್ದ ಧೂಳು ಇವುಗಳು ಸೋಕಲೂ, ದೇವೇಂದ್ರನ ಐಶ್ವರ್ಯ ಸಹಾ ಕ್ಷಯಿಸುವದು ||೪೪||

ಮೂ| ಕೃಷಿತೋನಾಸ್ತಿದುರ್ಭಿಕ್ಷಂಜಪತೋನಾಸ್ತಿಪಾತಕಂ | ಮೌನೇನಕಲಹೋನಾಸ್ತಿನಾಸ್ತಿಜಾಗರತೋಭಯಂ || ಟೀ || ಕೃಷಿಯು ದೆಸೆಯಿಂದ ದು

ಘರ್ಷವಿಲ್ಲ. ಜಪದ ದೆಸೆಯಿಂದ-ಪಾಪವಿಲ್ಲ. ಮೌನದಿಂ ಕಲಹವಿಲ್ಲ. ಜಾಗರಣದಿಂ ಭಯವಿಲ್ಲ || || ೪೫ ||

ಮೂ|| ವರಮೇಕೋಪಿಗುಣವಾನ್ನನಿರ್ಗುಣಾನಾಂಶತಾದಪಿ | ಕಾನ್ತಿಮಾಂಶ್ಚಂದ್ರಏಕೋಪಿನಕ್ಷತ್ರೈರ್ಭೋಽತಿರಿಚ್ಯತೇ|| || ಟೀ || ಗುಣವಂತನೊಬ್ಬನು ನೂರು ಮಂದಿ ಗುಣಹೀನರಿಗಿಂತಲೂ ಶ್ರೇಷ್ಠನು, ಕಾಂತಿಯುಳ್ಳ ಚಂದ್ರನು ಅನೇಕ ನಕ್ಷತ್ರಗಿಂತಲೂ ಅತಿಶಯವುಳ್ಳವನಾಗಿರುತ್ತಾನೆ || || ೪೬ ||

ಮೂ || ಪ್ರಸ್ತಾವಸದೃಶಂವಾಕ್ಯಂಸ್ವಭಾವಸದೃಶೀಂಕ್ರಿಯಾಂ | ಆತ್ಮಶಕ್ತಿಸಮಂಕೋಪಂಯೋಜಾನಾತಿಸಪಂಡಿತಃ|| ||ಟೀ|| ಪ್ರಕೃತೋಚಿತವಾದ ಮಾತನ್ನು, ತನ್ನ ಸ್ವಭಾವಕ್ಕೆ ಸರಿಯಾದ ಕಾರ್ಯವನ್ನು, ತನ್ನ ಶಕ್ತಿಗೆತಕ್ಕ ಕೋಪವನ್ನು, ಯಾವನು ತಿಳಿಯುತ್ತಾನೋ ಅವನೇ ಪಂಡಿತನು. ||೪೭||

ಮೂ|| ವಿವಾದಶೀಲಾಂಸ್ವಯಮರ್ಥಚೋರಿಣೀಂಪರಾನುಕೂಲಾಂಪರಿಹಾಸಭಾಷಿಣೀಂ | ಅಗ್ರಾಶಿನೀಮನ್ಯಗೃಹಪ್ರವೇಶನೀಂತ್ಯಜಂತಿಭಾರ್ಯಾಂದಶಪುತ್ರಮಾತರಂ || ||ಟೀ|| ಜಗಳವಾಡುವ ಸ್ವಭಾವವುಳ್ಳವಳಾಗಿಯೂ, ಮನೆಯ ಸ್ವತ್ತನ್ನು ಕದಿಯುವವಳಾಗಿಯೂ, ಅನ್ಯರಿಗೆ ಅನುಕೂಲಳಾಗಿಯೂ, ಅನ್ಯರೊಂದಿಗೆ ಪರಿಹಾಸದ ಮಾತಾಡುವವಳಾಗಿಯೂ, ಪತಿಗಿಂತಲೂ ಮುಂದೆ ಭುಜಿಸುವಳಾಗಿಯೂ, ಅನ್ಯರ ಮನೆಗಳನ್ನು ಪ್ರವೇಶಿಸುವವಳಾಗಿಯೂ, ಇರುವ ಭಾರ್ಯೆಯು ಹತ್ತು ಮಕ್ಕಳಿಗೆ ತಾಯಾಗಿದ್ದರೂ ಅವಳಂತ್ಯಜಿಸಬೇಕು.

ಮೂ || ದಾಸೀಸಮಾಗುಣೋಪೇತಾರಮಾಕಾರ್ಯೇಷುಮಂತ್ರಿಣೀ | ಭೋಜ್ಯೇಷುಮಾತಾಶಯನೇವೇಶ್ಯಾಸ್ಯಾತ್ಷಡ್ವಿಧಾಸತೀ || || ಟೀ || ಪತಿವ್ರತೆಯಾದ ಸ್ತ್ರೀಯು ಗಂಡನಿಗೆ ಸೇವೆಯಲ್ಲಿ ಚೇಟಿಯಂತೆಯೂ, ರೂಪದಲ್ಲಿ ಲಕ್ಷ್ಮೀದೇವಿಯಂತೆಯೂ, ಕರ್ತವ್ಯವನ್ನು ತಿಳಿಸುವದರಲ್ಲಿ ಮಂತ್ರಿಯಂತೆಯೂ, ಅನ್ನಪಾನಾದಿಗಳಲ್ಲಿ ತಾಯಿಯಂತೆಯೂ, ಹಾಸಿಗೆಯಲ್ಲಿ ಸೂಳೆಯಂತೆಯೂ, ಹೀಗೆ ಆರು ಬಗೆಯಾಗಿ ಇರುವಳು || || ೪೯ ||

ಮೂ || ನವಿಷಂತದ್ವಿಷಂಮಿತ್ಯುತ್ತು ಬ್ರಹ್ಮಸ್ವಂವಿಷಮುಚ್ಯತೇ | ವಿಷಮೇಕಾಕಿನಂಹಂತಿಬ್ರಹ್ಮಸ್ವಂಪುತ್ರಪೌತ್ರಕಂ|| || ಟೀ ||- ಯಾವದನ್ನು ವಿಷವೆನ್ನುತ್ತಾರೋ ಅದು ವಿಷವಲ್ಲವು, ಬ್ರಾಹ್ಮಣರ ಸ್ವತ್ತು ವಿಷವು. ಯಾಕಂದರೆ, ವಿಷವು ಕೊಂದವನೊಬ್ಬನನ್ನೇ ಕೊಲ್ಲುವದು. ಬ್ರಹ್ಮ ಸ್ವತ್ತು ವಂಶಪರಂಪರೆಯನ್ನೆ ಅಳಿಸುವದು || || ೫೦ ||

ಮೂ || ಏಕಂಹನ್ಯಾನ್ನವಾಹನ್ಯಾ ದಿಷುರ್ಮುಕ್ತೋ ಧನುಷ್ಮತಾ | ಬುದ್ಧಿ

ಬುದ್ಧಿರ್ಬುದ್ಧಿಮತೋತ್ಸೃಷ್ಟಾಹನ್ಯಾದ್ರಾಷ್ಟ್ರಂಸರಾಜಕಂ|| ||ಟೀ|| ಬಿಲ್ಲುಗಾರನಿಂದ ಬಿಡಲ್ಪಟ್ಟ ಅಂಬು ಒಬ್ಬನಂ ಕೊಲ್ಲುವದು, ಅಥವಾ ತಪ್ಪಿಹೋಗುವದು, ಬುದ್ಧಿವಂತನಿಂದ ಪ್ರಯೋಗಿಸಲ್ಪಟ್ಟ ಬುದ್ಧಿಯು ಅರಸನನ್ನು ರಾಜ್ಯವನ್ನು ಸಹ ಅಳಿಸುವದು || ||೪೧||

ಮೂ|| ಶತನಿಷ್ಕೋಧನಾಢ್ಯಶ್ಚ ಶತಗ್ರಾಮ್ಯೈಸ್ತುಭೂಪತಿಃ| ಶತೌಷಧೈಶ್ಚ ವೈದ್ಯಸ್ತು ಶತಶ್ಲೋಕೈಶ್ಚ ಪಂಡಿತಃ|| ||ಟೀ|| ನೂರು ವರಹಾವುಳ್ಳವನು ಧನಿಕನು, ನೂರು ಗ್ರಾಮಗಳುಳ್ಳವನು ಅರಸನಾಗುತ್ತಾನೆ. ನೂರು ಔಷಧ ಬಲ್ಲವನು ವೈದ್ಯನು, ನೂರು ಶ್ಲೋಕಗಳನ್ನು ಕಲಿತವನು ಪಂಡಿತನಾಗುವನು||

ಮೂ|| ಶಕಟಂಪಂಚಹಸ್ತೇನ ದಶಹಸ್ತೇನವಾಜಿನಂ| ಗಜಂಹಸ್ತಸಹಸ್ರೇಣದುರ್ಜನಂದೂರತಸ್ತ್ಯಜೇತ್|| ||ಟೀ|| ಗಾಡಿಯನ್ನು ಐದು ಮೊಳದೂರದಲ್ಲಿ ಬಿಟ್ಟಿರಬೇಕು, ಕುದುರೆಯಂ ಹತ್ತು ಮೊಳದೂರದಲ್ಲಿ ಬಿಟ್ಟಿರಬೇಕು, ಆನೆಗೆ ಸಾವಿರ ಮೊಳದೂರದೊಳಿರಬೇಕು, ದುರ್ಜನನನ್ನು ದೂರದಲ್ಲಿ ಬಿಡಬೇಕು|| ||೪೨||

ಮೂ|| ದರಿದ್ರಸ್ಯವಿಷಂಗೋಷ್ಠೀವೃದ್ಧಸ್ಯತರುಣೀವಿಷಂ| ಅನಭ್ಯಾಸೇವಿಷಂಶಾಸ್ತ್ರಮಜೀರ್ಣೇಭೋಜನಂವಿಷಂ|| ||ಟೀ|| ಬಡವರಿಗೆ ಸಭೆಯು ವಿಷರೂಪವಹುದು, ಮುದುಕನಿಗೆ ಪ್ರಾಯದವಳು ವಿಷವಹುದು, ಅಭ್ಯಾಸವಿಲ್ಲದಿದ್ದರೆ ಶಾಸ್ತ್ರ ವಿಷವಹುದು, ತಿಂದ ಅನ್ನ ಜೀರ್ಣವಾಗದಿದ್ದರೆ ಭೋಜನವು ವಿಷವಹುದು, (ಅಂದರೆ) ದರಿದ್ರರು ಮುಂತಾದವರು ಸಭೆ ಮೊದಲಾದವುಗಳನ್ನಪೇಕ್ಷಿಸಲಾರರೆಂದು ಭಾವವು|| ||೪೩||

ಮೂ|| ಲಕ್ಷ್ಮೀರ್ವೈರ್ಮೈತ್ರೀಬಂಧುತಾಭೋಗಭಾಗ್ಯೇ| ಧರ್ಮಾಧರ್ಮೌಬಂಧನಂಪಂಚತಾವಾ|| ಸರ್ವಂಹ್ಯೇತದ್ವರ್ತತೇಜಿಹ್ವಕಾಗ್ರೇ| ತಸ್ಮಾಲ್ಲೋಕೇಸಾಧುವಾಕ್ಸೌಖ್ಯಮೇತಿ|| ||ಟೀ|| ಐಶ್ವರ್ಯವು, ಸ್ನೇಹವು, ಬಾಂಧವ್ಯವು, ಭೋಗ ಭಾಗ್ಯಗಳು, ಧರ್ಮಾಧರ್ಮಗಳು, ಬಂಧನವು, ಮರಣವು, ಇವೆಲ್ಲಾ ಮನುಷ್ಯನ ನಾಲಿಗೆ ತುದಿಯಲ್ಲಿ ಇಹವಾಗಿ ಒಳ್ಳೆಯ ಮಾತುಳ್ಳವನು ಸುಖವನ್ನೈದುವನು|| ||೪೪||

ಮೂ|| ಅದಾನದೋಷೇಣ ಭವೇದ್ದರಿದ್ರೋದಾರಿದ್ರದೋಷೇಣಕರೋತಿಪಾಪಂ| ಪಾಪಾದ್ದರಿದ್ರೋಭವತೀಹಮರ್ತ್ಯಃಪುನರ್ದರಿದ್ರಃಪುನರೇವಪಾಪಿ|| ಟೀ|| ಮನುಷ್ಯನು ಜನ್ಮಾಂತರದೋಳ್ ದಾನವಂ ಮಾಡದ್ದರಿಂದ ದರಿದ್ರನಾಗಿ ಹುಟ್ಟುವನು, ದಾರಿದ್ರ್ಯದಿಂದ ಪಾಪಿಷ್ಠನಾಗುವನು, ಪಾಪದಿಂ

ಮರಳಿ ದರಿದ್ರನಾಗಿ ಜನಿಸುವನು. ಆದಕಾರಣ ಪುನಃಪುನಃ ದರಿದ್ರನೂ ಪಾ
ಪಿಷ್ಠನೂ ಆಗುತ್ತಾನಾಗಿ, ಧನವಂತನಾದವನು ದಾನವಂ ಮಾಡಬೇಕೆಂ
ದು ಭಾವವು || || ೫೬ ||

ಮೂ|| ಅತಿಥಿರ್ಬಾಲಕಶ್ಚೈವಸ್ತ್ರೀಜನೋನೃಪತಿಸ್ತಥಾ | ಏತೇವಿತ್ತಂನ
ಜಾನಂತಿಜಾಮಾತಾಚೈವಪಂಚಮಃ || || ಟೀ || ಅತಿಥಿಯು, ಬಾಲಕನು,
ಹೆಂಗಸು, ಅರಸನು, ಅಳಿಯನು, ಈ ಐವರೂ ಮನುಷ್ಯನ ಅನುಪಪತ್ತಿ
ಯನ್ನರಿಯರು || || ೫೭ ||

ಮೂ || ದುಷ್ಟಂದೇಶಂಕಳತ್ರಂಚಮಿತ್ರಂರಾಷ್ಟ್ರಂಚಬಾಂಧವಂ | ರಾ
ಜಾನಂಚಾಪಿಮತಿವರ್ಜ ದೂರತಃಪರಿವರ್ಜಯೇತ್ || || ಟೀ || ದುರ್ಗು
ಣವುಳ್ಳ ದೇಶ, ಭಾರ್ಯೆಯು, ಮಿತ್ರನು, ರಾಜ್ಯವು, ನೆಂಟರು, ಅರಸು ಇವೆ
ರುಗಳನ್ನು ದೂರದಲ್ಲಿ ಬಿಡಬೇಕು || || ೫೮ ||

ಮೂ || ಸ್ತ್ರೀಣಾಂದ್ವಿಗುಣಆಹಾರೋಬುದ್ಧಿಶ್ಚಾಪಿಚತುರ್ಗುಣಾ | ಸಾ
ಹಸಷ್ಷಡ್ಗುಣಶ್ಚೈವಕಾಮೋಷ್ಟಗುಣಉಚ್ಯತೇ || || ಟೀ || ಹೆಂಗಸರಿಗೆ
ಪುರುಷರಿಗಿಂತಲೂ ಆಹಾರ ಇಮ್ಮಡಿಯಾಗಿರುತ್ತದೆ, ಬುದ್ಧಿಯು, ಚತುರ್ಗು
ಣವಾಗಿಹುದು, ಸಾಹಸ ಆರು ಗುಣವಾಗಿಹುದು, ಕಾಮ ವೆಂಟುಪಾಲು ಅಧಿ
ಕವಾಗಿಹುದು || || ೫೯ ||

ಮೂ || ರಾಜಾರಾಷ್ಟ್ರಕೃತಂಪಾಪಂರಾಜಪಾಪಂಪುರೋಹಿತಃ | ಭ
ರ್ತಾಚಸ್ತ್ರೀಕೃತಂಪಾಪಂಶಿಷ್ಯಪಾಪಂಗುರುಂವ್ರಜೇತ್|| ||ಟೀ|| ಪ್ರಜೆಗ
ಳ ಪಾಪ ಅರಸನನ್ನು, ಅರಸನ ಪಾಪ ಪುರೋಹಿತನನ್ನು, ಹೆಂಡತಿಯ ಪಾಪ
ಗಂಡನನ್ನು, ಶಿಷ್ಯನ ಪಾಪ ಗುರುವನ್ನು, ಹೊಂದುವದು || || ೬೦ ||

ಮೂ || ಗೀತೇವಾದ್ಯೇತಥಾನೃತ್ತೇಸಂಗ್ರಾಮೇಸಂಗಮೆತಥಾ | ಆಹಾರೇವ್ಯ
ವಹಾರೆಚತ್ಯಕ್ತಲಜ್ಜಸ್ಸುಖೀಭವೇತ್|| || ಟೀ || ಗಾಯನದಲ್ಲೂ, ವಾದ್ಯ
ಬಾರಿಸುವದರಲ್ಲಿಯೂ, ನರ್ತನದಲ್ಲೂ, ಯುದ್ಧದಲ್ಲಿಯೂ, ಸ್ತ್ರೀ ಸಂಗಮ
ದಲ್ಲಿಯೂ, ಆಹಾರದಲ್ಲೂ, ವ್ಯವಹಾರದಲ್ಲೂ ನಾಚಿಕೆಯನ್ನು ಬಿಟ್ಟವನಿಗೆ
ಸೌಖ್ಯ ಉಂಟು. ಇಲ್ಲಿ ಹೇಳಲ್ಪಟ್ಟ ಕಾರ್ಯಗಳನ್ನು ಧೈರ್ಯದೊಡನೆ ಮಾಡಿ
ದರೆ ಸುಖ ಉಂಟೆಂದು ಭಾವವು || || ೬೧ ||

ಮೂ || ರೂಪಯುವ್ವನ ಸಂಪನ್ನಾವಿಶಾಲಕುಲಸಂಭವಾಃ | ವಿದ್ಯಾಹೀ
ನಾನಶೋಭಂತೆನಿರ್ಗಂಧಾಇವಕಿಂಶುಕಾಃ || ||ಟೀ|| ರೂಪ ಯುವ್ವನವು
ಳ್ಳವರಾಗಿ, ಸತ್ಕುಲದಲ್ಲಿ ಹುಟ್ಟಿದವರಾದರೂ, ಮನುಷ್ಯರು ವಿದ್ಯಾಹೀನರಾಗಿ
ದ್ದರೆ ಗಂಧವಿಲ್ಲದ ಮುತ್ತುಗಳಂತೆ ಶೋಭಿಸಲಾರರು || || ೬೨ ||

ಮೂ|| ತ್ಯಜೇದೇಕಂಕುಲಸ್ಯಾರ್ಥೇಗ್ರಾಮಸ್ಯಾರ್ಥೇಕುಲಂತ್ಯಜೇತ್ । ಗ್ರಾಮಂಜನಪದಸ್ಯಾರ್ಥೇಆತ್ಮಾರ್ಥೇಪೃಥಿವೀಂತ್ಯಜೇತ್|| ||ಟೀ|| ಒಂದು ಕುಲವನ್ನು ರಕ್ಷಿಸುವದಕ್ಕಾಗಿ ಆದರೊಳಗೊಬ್ಬನಂ ಬಿಡಬಹುದು, ಒಂದು ಗ್ರಾಮಕ್ಕೋಸ್ಕರ ಒಂದು ಕುಲವಂ ಬಿಡಬಹುದು, ಒಂದು ದೇಶಕ್ಕಾಗಿ ಯೊಂದುಗ್ರಾಮವಂ ಬಿಡಬೇಕು, ತನ್ನ ಪ್ರಾಣಕ್ಕೋಸ್ಕರ ಭೂಮಿಯನ್ನೇ ಬಿಡಬೇಕು ||

ಮೂ|| ಕೋಕಿಲಾನಾಂಸ್ವರೋರೂಪಂ ಪಾತಿವ್ರತ್ಯಂತುಯೋಷಿತಾಂ । ವಿದ್ಯಾರೂಪಂತುವಿಪ್ರಾಣಾಂ ಕ್ಷಮಾರೂಪಂತಪಸ್ವಿನಾಂ || ||ಟೀ|| ಸ್ವರವೇ ಕೋಕಿಲಗಳ ಸ್ವರೂಪ, ಹೆಂಗಸರಿಗೆ ಪಾತಿವ್ರತ್ಯವೇ ಸ್ವರೂಪ, ಬ್ರಾಹ್ಮಣರಿಗೆ ವಿದ್ಯೆಯೇ ಸ್ವರೂಪ, ತಪಸ್ವಿಗಳಿಗೆ ಕ್ಷಮೆಯೆ ಸ್ವರೂಪವು ||೬೪||

ಮೂ|| ದೈವಾಧೀನಂಜಗತ್ಸರ್ವಂಮಂತ್ರಾಧೀನಂತುದೈವತಂ । ತನ್ಮಂತ್ರಬ್ರಾಹ್ಮಣಾಧೀನಂಬ್ರಾಹ್ಮಣೋ ಮಮದೇವತಾ || ||ಟೀ|| ಲೋಕವೆಲ್ಲವೂ ದೈವಾಧೀನವು, ದೇವರು ಮಂತ್ರಾಧೀನರು, ಆ ಮಂತ್ರವು ಬ್ರಾಹ್ಮಣಾಧೀನವು, ಆದದರಿಂದ ಬ್ರಾಹ್ಮಣರೇ ಭೂದೇವತೆಗಳು || ||೬೫||

ಮೂ|| ಪಿಬಂತಿನದ್ಯಸ್ಸ್ವಯಮೇವನಾಂಭಃ । ಖಾದಂತಿನಸ್ವಾನಿಫಲಾನಿವೃಕ್ಷಾಃ । ಪಯೋಧರಾಸ್ಸಸ್ಯಮದಂತಿನೈವ । ಪರೋಪಕಾರಾಯಸತಾಂವಿಭೂತಯಃ || ||ಟೀ|| ನದಿಗಳು ತಮ್ಮ ನೀರನ್ನು ತಾವೇ ಕುಡಿಯುವದಿಲ್ಲ, ವೃಕ್ಷಗಳು ಫಲಗಳನ್ನು ತಾವೇ ತಿನ್ನುವದಿಲ್ಲ, ಮೇಘಗಳು ತಾವು ಬೆಳೆಯಿಸಿದ ಧಾನ್ಯಗಳನ್ನು ತಾವೇ ತಿನ್ನುವದಿಲ್ಲವಾಗಿ ಸತ್ಪುರುಷರ ಐಶ್ವರ್ಯವು ಅನ್ಯರ ಉಪಕಾರಕ್ಕೆ ಆಗುತ್ತದೆ || ||೬೬||

ಮೂ|| ಪಕ್ಷೀಣಾಂಬಲಮಾಕಾಶಂಮತ್ಸ್ಯಾನಾಮುದಕಂಬಲಂ । ದುರ್ಬಲಸ್ಯಬಲಂರಾಜಾಬಾಲಾನಾಂರೋದನಂಬಲಂ || ||ಟೀ|| ಪಕ್ಷಿಗಳಿಗೆ ಆಕಾಶವು ಬಲ, ಮೀನುಗಳಿಗೆ ನೀರು ಬಲ, ದುರ್ಬಲರಿಗೆ ಅರಸನೇ ಬಲ, ಯಳೆಮಕ್ಕಳಿಗೆ ಅಳುವದೇ ಬಲ || ||೬೭||

ಮೂ|| ವೃಶ್ಚಿಕಸ್ಯವಿಷಂಪುಚ್ಛಂಮಕ್ಷಿಕಸ್ಯವಿಷಂಶಿರಃ । ತಕ್ಷಕಸ್ಯವಿಷಂದಂಷ್ಟ್ರಾಸರ್ವಾಂಗಂದುರ್ಜನೇವಿಷಂ || ||ಟೀ|| ಚೇಳಿಗೆ ಕೊಂಡಿಯೇ ವಿಷ, ನೊಣಕ್ಕೆ ತಲೆಯೇ ವಿಷ, ಹಾವಿಗೆ ಹಲ್ಲು ವಿಷ, ದುರ್ಜನನಿಗೆ ಸರ್ವಾಂಗವೂ ವಿಷವೆ || ||೬೮||

ಮೂ|| ಪುಸ್ತಕೇಷುಚಯಾವಿದ್ಯಾಪರಹಸ್ತೇಚಯದ್ಧನಂ । ಸಮಯೇತುಪರಿಪ್ರಾಪ್ತೇನಸಾವಿದ್ಯಾನತದ್ಧನಂ|| ||ಟೀ|| ಪುಸ್ತಕಪಾಠವಾದ ವಿದ್ಯೆಯು

ಅನ್ಯರ ಕೈಯ್ಯಲ್ಲಿ ಕೊಟ್ಟಧನವು, ಇವೆರಡೂ ತನ್ನ ಸಮಯಕ್ಕೆ ಉಪಯೋಗಿಸುವದಿಲ್ಲ || || ೧೯ ||

ಮೂ || ನಶ್ಯತ್ಯನಾಯಕಂಕಾರ್ಯಂತಥೈವಶಿಶುನಾಯಕಂ | ಸ್ತ್ರೀನಾಯಕಂತಥೋನ್ಮತ್ತನಾಯಕಂಬಹುನಾಯಕಂ|| ||ಟೀ|| ಯಾವ ಕಾರ್ಯಕ್ಕೆ ನಾಥನಿಲ್ಲವೋ, ಮತ್ತು ಹುಡುಗರು, ಹೆಂಗಸರು, ಹುಚ್ಚರು, ಬಹುಜನವು ನಾಥರಾಗುತ್ತಾರೆಯೋ ಆ ಕಾರ್ಯ ನಾಶವನ್ನು ಹೊಂದುವದು || || ೨೦ ||

ಮೂ|| ಅಭ್ಯಾಸಾನುಗತಾವಿದ್ಯಾಬುದ್ಧಿಃಕರ್ಮಾನುಸಾರಿಣೀ | ಉದ್ಯೋಗಾನುಗತಾಸಂಪತ್‌ಫಲಂಭಾಗ್ಯಾನುಸಾರಿಚ || ||ಟೀ|| ಅಭ್ಯಾಸವಿದ್ದಂತೆ ವಿದ್ಯೆ ಇರುವದು, ಕರ್ಮವಿದ್ದಂತೆ ಬುದ್ಧಿ ಇರುವದು, ಪ್ರಯತ್ನವಿದ್ದಂತೆ ಸಂಪತ್ತು ಇರುವದು, ಭಾಗ್ಯವಿದ್ದಂತೆ ಫಲ ಉಂಟಾಗುವದು || || ೨೧ ||

ಮೂ || ವಸಂತಯವ್ವನಾವೃಕ್ಷಾಃಪುರುಷಾಧನಯವ್ವನಾಃ | ಸೌಭಾಗ್ಯಯವ್ವನಾಃನಾರ್ಯಃ ಯುವಾನೊವಿದ್ಯಯಾಬುಧಾಃ || || ಟೀ || ವೃಕ್ಷಗಳಿಗೆ ವಸಂತಕಾಲವೇ ಯವ್ವನ, ಪುರುಷರಿಗೆ ಧನವೇ ಯವ್ವನ, ಸ್ತ್ರೀಯರಿಗೆ ಸೌಭಾಗ್ಯವೇ ಯವ್ವನ, ಪಂಡಿತರಿಗೆ ವಿದ್ಯೆಯೇ ಯವ್ವನ || || ೨೨ ||

ಮೂ || ವೃಧಾವೃಷ್ಟಿಸ್ಸಮುದ್ರೇಚವೃಧಾತೃಪ್ತೇಚಭೋಜನಂ | ವೃಧಾಧನಪತೌದಾನಂದಾರಿದ್ರ್ಯೇಯವ್ವನಂವೃಧಾ|| ||ಟೀ|| ಸಮುದ್ರದಲ್ಲಿ ಹೊಯಿದ ಮಳೆಯು ವ್ಯರ್ಥ, ಹಸಿವಿಲ್ಲದವನಿಗೆ ಹಾಕಿದ ಅನ್ನವು ವ್ಯರ್ಥ, ಧನವಂತನಿಗೆ ಕೊಟ್ಟ ದಾನವು ವ್ಯರ್ಥ, ದರಿದ್ರನಿಗೆ ಬಂದ ಯವ್ವನ ವ್ಯರ್ಥ || ೨೩ ||

ಮೂ || ಅರ್ಥಾಗೃಹೇನಿವರ್ತಂತೇಸ್ಮಶಾನೇಮಿತ್ರಬಾಂಧವಾಃ | ಸುಕೃತಂದುಷ್ಕೃತಂಚೈವ ಗಚ್ಛಂತಮನುಗಚ್ಛತಿ || || ಟೀ || ಧನವು ಮನೆಯಲ್ಲಿಯೇ ನಿಂತುಹೋಗುತ್ತದೆ, ಮಿತ್ರಬಾಂಧವರು ಸ್ಮಶಾನದವರಿಗೂ ಬರುತ್ತಾರೆ, ಪುಣ್ಯಪಾಪಗಳೆರಡೂ ಸತ್ತವನನ್ನು ಬೆನ್ನಟ್ಟುತ್ತದೆ|| || ೨೪ ||

ಮೂ || ತಸ್ಕರಸ್ಯವಧೋದಂಡೋದಾಸೇದಂಡಸ್ತುಮುಂಡನಂ | ಭಾರ್ಯಾದಂಡಃಪೃಥಕ್ಶಯ್ಯಾಮಿತ್ರದಂಡಮಭಾಷಣಂ || || ಟೀ || ಕಳ್ಳನಿಗೆ ವಧವೇ ದಂಡನವು, ಚಾಕರಿ ಮಾಡುವವಳಿಗೆ ತಲೆಬೋಳಿಸುವದೇ ದಂಡನವು, ಬೇರೇ ಹಾಸಿಗೆಯಲ್ಲಿ ಮಲಗುವದೇ ಹೆಂಡತಿಗೆ ಶಿಕ್ಷೆಯು, ಮಾತಾಡದಿರುವದೇ ಸ್ನೇಹಿತನಿಗೆ ಶಿಕ್ಷೆಯು || || ೨೫ ||

ಮೂ|| ಪಿತಾಚಋಣವಾನ್ಶತ್ರುರ್ಮಾತಾಚವ್ಯಭಿಚಾರಿಣೀ | ಭಾರ್ಯಾರೂಪವತೀಶತ್ರುಃಪುತ್ರಶ್ಶತ್ರುರಪಂಡಿತಃ || || ಟೀ || ಸಾಲಗಾರನಾದ ತಂ

ದೆಯೇ ಶತ್ರುವು, ಹಾದರಗಿತ್ತಿಯಾದ ತಾಯಿ ಶತ್ರುವು, ರೂಪವತಿಯಾದ ಹೆಂಡತಿ ಶತ್ರುವು, ಮೂಢನಾದ ಮಗನು ಶತ್ರುವು ॥ ॥ ೭೬ ॥

ಮೂ॥ ಪಿತಾರಕ್ಷತಿಕೌಮಾರೆ ಭರ್ತಾರಕ್ಷತಿಯವ್ವನೆ । ಪುತ್ರೋರಕ್ಷತಿ ವಾರ್ಧಕ್ಯೆನಸ್ತ್ರೀಸ್ವಾತಂತ್ರ್ಯಮರ್ಹತಿ ॥ ॥ ಟೀ ॥ ಸ್ತ್ರೀಯರನ್ನು ಬಾಲ್ಯದಲ್ಲಿ ತಂದೆ ರಕ್ಷಿಸುವನು, ಯವ್ವನದಲ್ಲಿ ಪತಿಯು ರಕ್ಷಿಸುವನು, ಮುಪ್ಪಿನಲ್ಲಿ ಮಗನು ರಕ್ಷಿಸುವನು, ಆದದರಿಂದ ಸ್ತ್ರೀಯರಿಗೆ ಯಾವಾಗ್ಯೂ ಸ್ವಾತಂತ್ರ್ಯವಿಲ್ಲ ॥ ॥ ೭೭ ॥

ಮೂ॥ ಅಗ್ನಿಹೊತ್ರಗೃಹಂಕ್ಷೇತ್ರಂ ಗರ್ಭಿಣೀಂವೃದ್ಧಬಾಲಕಾ । ರಿಕ್ತಹಸ್ತೆನಸೊಪೆಯಾದ್ರಾಜಾನಂದೈವತಂಗುರುಂ ॥ ॥ ಟೀ ॥ ಅಗ್ನಿಹೋತ್ರವಿರುವ ಮನೆಯನ್ನು, ಪುಣ್ಯಕ್ಷೇತ್ರವನ್ನು, ಗರ್ಭವತಿಯಾದ ಸ್ತ್ರೀಯನ್ನು, ವೃದ್ಧರನ್ನು, ಬಾಲಕರನ್ನು, ಅರಸರನ್ನು ದೇವರನ್ನು, ಗುರುವನ್ನು, ನೋಡಲಿಕ್ಕೆ ಶೂನ್ಯಹಸ್ತನಾಗಿ ಸಮೀಪಕ್ಕೆ ಹೋಗಕೂಡದು ॥ ॥ ೭೮ ॥

ಮೂ॥ ಅಹೊಪ್ರಕೃತಿಸಾದೃಶ್ಯಂಶ್ಲೇಷ್ಮಣೊದುರ್ಜನಸ್ಯಚ । ಮಾಧುರ್ಯೈಃ ಕೊಪಮಾಯಾತಿ ಕಟುಕೈರುಪಶಾಮ್ಯತಿ॥ ॥ಟೀ॥ ದುರ್ಜನನಿಗೂ, ಶ್ಲೇಷ್ಮರೋಗಕ್ಕೂ, ಸ್ವಭಾವಸಮವಾಗಿರುವದು ಆಶ್ಚರ್ಯವಾಗಿದೆ. ಹ್ಯಾಗಂದರೆ, ಮಧುರವಾದ ಮಾತುಗಳಿಂದ ದುರ್ಜನನು ಹೆಚ್ಚುವನು, ಮಧುರವಾದ ಪದಾರ್ಥಗಳಿಂದ ಶ್ಲೇಷ್ಮವು ಹೆಚ್ಚುವದು, ಖಾರವಾದ ಮಾತುಗಳಿಂದ ಇವನು ಶಾಂತನಾಗುವನು, ಖಾರವಾದ ಪದಾರ್ಥಗಳಿಂದ ಇದು ಶಾಂತವಾಗುವದು॥

ಮೂ॥ ಜನಿತಾಚೋಪನೆತಾಚಯಸ್ತುವಿದ್ಯಾಂಪ್ರಯಚ್ಛತಿ । ಅನ್ನದಾತಾ ಭಯತ್ರಾತಾಪಂಚೈತೆಪಿತರಸ್ಮೃತಾಃ ॥ ॥ ಟೀ ॥ ಹುಟ್ಟಿಸುವವನು, ಉಪನಯನ ಮಾಡುವವನು, ವಿದ್ಯೋಪದೇಶ ಮಾಡುವವನು, ಅನ್ನವ ಕೊಡುವವನು, ಅಭಯ ಕೊಡುವವನು, ಈ ಐದು ಜನವೂ ತಂದೆಗಳಾಗುತ್ತಾರೆ ॥

ಮೂ॥ ದರಿದ್ರಾಯಕೃತಂದಾನಂಶೂನ್ಯಲಿಂಗಸ್ಯಪೂಜನಂ । ಅನಾಥಪ್ರೇತಸಂಸ್ಕಾರಶ್ಚಾಶ್ವಮೆಧಸಮಾಇಮೆ ॥ ॥ ಟೀ ॥ ದರಿದ್ರನಿಗೆ ಮಾಡಲ್ಪಟ್ಟ ದಾನವು, ಶೂನ್ಯವಾದ ಶಿವಲಿಂಗಕ್ಕೆ ಮಾಡಿದ ಪೂಜೆಯು, ಅನಾಥವಾದ ಹೆಣಕ್ಕೆ ಸಂಸ್ಕಾರವು, ಇವೆಲ್ಲವೂ ಅಶ್ವಮೇಧಕ್ಕೆ ಸಮಾನವಾದವುಗಳು ॥೮೧॥

ಮೂ ॥ ದಾತೃತ್ವಂಪ್ರಿಯವಕ್ತೃತ್ವಂಧೀರತ್ವಮುಚಿತಜ್ಞತಾ । ಅಭ್ಯಾಸೆನನಲಭ್ಯಂತೆಚತ್ವಾರಸ್ಸಹಜಾಗುಣಾಃ ॥ ॥ ಟೀ ॥ ದಾತೃತ್ವವು, ಹಿತವಾದನುಡಿ, ಧೈರ್ಯವು, ಉಚಿತವ ತಿಳಿಯುವಿಕೆ, ಈ ನಾಲ್ಕು ಗುಣಗಳೂ ಮ

ಮನುಷ್ಯರಿಗೆ ಸಹಜ ಗುಣಗಳಾದದರಿಂದ ಅಭ್ಯಾಸದಿಂ ಬರಲಾರವು || ೮೨ ||

ಮೂ || ಭುಕ್ತ್ವಾಮಲಕಂಪಥ್ಯಂಭುಕ್ತ್ವಾತುಬದರೀಫಲಂ | ಕಪಿತ್ಥಂಸರ್ವದಾಪಥ್ಯಂಕದಳೀನಕದಾನಚ || || ಟೀ || ಉಂಣದೆ ಕೊಂಡನೆಲ್ಲಿಕಾಯಿ ಪಥ್ಯ, ಉಂಡು ಬೋರೆಹಂಣು ಪಥ್ಯವು, ಬೇಲದಹಂಣು ಯಾವಾಗ್ಯೂ ಪಥ್ಯವು, ಬಾಳೆಹಂಣು ಯಾವಾಗ್ಯೂ ಅಪಥ್ಯವು || || ೮೩ ||

ಮೂ || ಶ್ಲೋಕಾರ್ಧೇನಪ್ರವಕ್ಷ್ಯಾಮಿ ಯದುಕ್ತಂಗ್ರಂಥಕೋಟಿಭಿಃ | ಪರೋಪಕಾರಃಪುಣ್ಯಾಯ ಪಾಪಾಯಪರಪೀಡನಂ || || ಟೀ || ಅನೇಕ ಕೋಟಿ ಗ್ರಂಥಗಳಿಂದ ಹೇಳಲ್ಪಟ್ಟ ಅಂಶವು ಶ್ಲೋಕಾರ್ಧದಿಂದ ಹೇಳಲ್ಪಡುತ್ತದೆ. ಹ್ಯಾಗಂದರೆ,-ಪರೋಪಕಾರವೇ ಪುಣ್ಯವು, ಪರಾಪಕಾರವೇ ಪಾಪವೆಂದು ತಿಳಿಯುವದು || || ೮೪ ||

ಮೂ|| ದುಷ್ಟಭಾರ್ಯಾಶಠಂಮಿತ್ರಂಭೃತ್ಯೋಹಂಕಾರದೂಷಿತಃ|ಸಸರ್ಪೇಚಗೃಹೇವಾಸೋಮೃತ್ಯುಸ್ಥಾನಂಚತುರ್ವಿಧಂ|| || ಟೀ || ದುಷ್ಟೆಯಾದ ಹೆಂಡತಿಯು, ಕುಬುದ್ಧಿಯುಳ್ಳ ಸ್ನೇಹಿತನು, ದುರಹಂಕಾರವುಳ್ಳ ಭೃತ್ಯನು, ಹಾವು ಸೇರಿದ ಮನೆಯು, ಈ ನಾಲ್ಕೂ ಮೃತ್ಯುಸ್ಥಾನವಾಗಿಹುದು || ೮೫ ||

ಮೂ || ಯತ್ರವಿದ್ಯಾಗಮೋನಾಸ್ತಿಯತ್ರನಾಸ್ತಿಧನಾಗಮಃ | ಯತ್ರಚಾತ್ಮಸುಖಂನಾಸ್ತಿನತತ್ರದಿವಸಂವಸೇತ್ || || ಟೀ || ಎಲ್ಲಿ ವಿದ್ಯಾಲಾಭವಿಲ್ಲವೋ, ಎಲ್ಲಿ ಧನಲಾಭವಿಲ್ಲವೋ, ಎಲ್ಲಿಯಾತ್ಮಸುಖಲಾಭವಿಲ್ಲವೋ, ಅಲ್ಲಿ ಒಂದು ದಿನವಾದರೂ ವಾಸ ಮಾಡಕೂಡದು || || ೮೬ ||

ಮೂ|| ಅಗ್ನಿಹೋತ್ರಫಲಾವೇದಾಃದತ್ತಭುಕ್ತಫಲಂಧನಂ | ರತಿಪುತ್ರಫಲಾನಾರ್ಯಃ ಶೀಲವೃತ್ತಫಲಂಶ್ರುತಂ || ||ಟೀ|| ವೇದಾಧ್ಯಯನಕ್ಕೆ ಅಗ್ನಿಹೋತ್ರವೇ ಫಲವು, ಧನಕ್ಕೆ ದಾನಭೋಗಗಳೇ ಫಲವು, ಭಾರ್ಯೆಯರಿಗೆ ರತಿ ಪುತ್ರೋತ್ಪತ್ತಿಗಳೇ ಫಲವು, ಶಾಸ್ತ್ರ ತಿಳಿದ್ದಕ್ಕೆ ಸದ್ವೃತ್ತಿಯೇ ಫಲವು ||೮೭||

ಮೂ || ಸ್ವಗೃಹೇಪೂಜ್ಯತೇಮೂರ್ಖಃಸ್ವಗ್ರಾಮೇಪೂಜ್ಯತೇಪ್ರಭುಃ | ಸ್ವದೇಶೇಪೂಜ್ಯತೇರಾಜಾವಿದ್ವಾನ್ಸರ್ವತ್ರಪೂಜ್ಯತೇ || ||ಟೀ|| ಮೂರ್ಖನಿಗೆ ತನ್ನ ಮನೆಯಲ್ಲಿಯೇ ಮರ್ಯಾದೆ, ಗ್ರಾಮಾಧಿಪನು ಗ್ರಾಮದಲ್ಲೇ ಪೂಜಿಸಲ್ಪಡುವನು, ಅರಸನು ತನ್ನ ದೇಶದಲ್ಲಿ ಪೂಜಿಸಲ್ಪಡುವನು, ವಿದ್ವಾಂಸನಿಗಾದರೋ ಸರ್ವದೇಶದಲ್ಲೂ ಪೂಜೆಯುಂಟಾಗುತ್ತದೆ || || ೮೮ ||

ಮೂ || ಕುವಾಸಸಂದಂತಮಲೀನದೂಷಿತಂಬಹ್ವಾಶಿನಂನಿಷ್ಠುರಭಾಷಣಂಚ | ಸೂರ್ಯೋದಯೇಚಾಸ್ತಮಯೇಚಶಾಯಿನಂ ವಿಮುಂಚತಿಶ್ರೀರಪಿಚಕ್ರಧಾ

ರಿಣಂ || || ಟೀ || ಮಲಿನ ವಸ್ತ್ರವನುಟ್ಟವನನ್ನು, ಹಲ್ಲುಜ್ಜದ ಮಲಿನ ದಂತನನ್ನು, ಹೇರಳವಾಗಿ ಯೆನ್ನ ತಿನ್ನುವವನನ್ನು, ಕ್ರೂರ ಮಾತಾಡುವವನನ್ನು ಸೂರ್ಯನ ಉದಯಾಸ್ತಮಯ ಕಾಲಗಳಲ್ಲಿ ಮಲಗಿರುವವನನ್ನು, ವಿಷ್ಣುವನ್ನಾಗಲೀ ಲಕ್ಷ್ಮಿ ಬಿಟ್ಟುಬಿಡುವಳು || ||೮೯||

ಮೂ || ದೀರ್ಘಶೃಂಗಮನಡ್ವಾಹಂ ನಿರ್ಲಜ್ಜಾಂಚಕುಲಸ್ತ್ರಿಯಂ | ಶೂದ್ರಮಕ್ಷರಸಂಯುಕ್ತಂದೂರತಃಪರಿವರ್ಜಯೇತ್ || || ಟೀ || ಉದ್ದವಾದ ಕೋಡುಳ್ಳ ವೃಷಭವನ್ನು, ನಾಚಿಕೆ ಇಲ್ಲದ ಕುಲಸ್ತ್ರೀಯನ್ನು, ವಿದ್ಯಾವಂತನಾದ ಶೂದ್ರನಂ ಸಹ ದೂರವಾಗಿ ಬಿಡಬೇಕು || ||೯೦||

ಮೂ || ಮುಖಂಪದ್ಮಪ್ರಸನ್ನಂಚ ವಾಚಶ್ಚಂದನಶೀತಳಾಃ | ಹೃದಯಂ ಕುಟಿಲಂನಿತ್ಯಂತ್ರಿವಿಧಂಧೂರ್ತಲಕ್ಷಣಂ || || ಟೀ || ಮುಖವು ಕಮಲದಂತೆ ಪ್ರಸನ್ನವಾಗಿಯೂ, ಮಾತು ಶ್ರೀಗಂಧದಂತೆ ತಂಪಾಗಿಯೂ, ಮನಸ್ಸು ಸದಾ ಕುಟಿಲವಾಗಿಯೂ, ಈ ಮೇರೆ ಮೂರು ವಿಧವಾಗಿ ಇರುವದು, ಧೂರ್ತರ ಲಕ್ಷಣವು || ||೯೧||

ಮೂ || ವಸ್ತ್ರಮುಖ್ಯಸ್ತ್ವಲಂಕಾರಃಪ್ರೀತಿಮುಖ್ಯಂತುಭೋಜನಂ | ಗುಣಮುಖ್ಯಾ ಕುಲವಧೂರ್ವಿದ್ಯಾಮುಖ್ಯಾದ್ವಿಜಾತಯಃ || || ಟೀ || ಅಲಂಕಾರಗಳಲ್ಲಿ ಮುಖ್ಯ ವಸ್ತ್ರವು, ಭೋಜನದಲ್ಲಿ ಮುಖ್ಯ ಆದರವು, ಸ್ತ್ರೀಗೆ ಗುಣವು ಮುಖ್ಯವು, ಬ್ರಾಹ್ಮಣರಿಗೆ ವಿದ್ಯೆಯು ಮುಖ್ಯವು|| ||೯೨||

ಮೂ || ಅಮೃತಂಸುಗುಣಾಭಾರ್ಯಾ ಅಮೃತಂಬಾಲಜಲ್ಪಿತಂ | ರಾಜಸನ್ಮಾನಮಮೃತಮಮೃತಂ ಪ್ರೀತಿಭೋಜನಂ || || ಟೀ || ಸುಗುಣವುಳ್ಳ ಸ್ತ್ರೀ ಅಮೃತವು, ಬಾಲಕರ ಮಾತು ಅಮೃತವು, ರಾಜಸನ್ಮಾನ ಅಮೃತವು ಪ್ರೀತಿಯಿಂದ ಇಕ್ಕಿದ ಭೋಜನ ಅಮೃತವು || ||೯೩||

ಮೂ || ದುರ್ವೃತ್ತೋವಾಸುವೃತ್ತೋವಾಮೂರ್ಖಃಪಂಡಿತಏವವಾ | ಕಾಷಾಯದಂಡಮಾತ್ರೇಣಯತಿಃಪೂಜ್ಯೋನಸಂಶಯಃ || ||ಟೀ|| ದುಷ್ಟನಾಗಲಿ, ಒಳ್ಳೆಯ ನಡತೆಯುಳ್ಳವನಾಗಲಿ, ಮೂರ್ಖನಾಗಲಿ, ಪಂಡಿತನಾಗಲಿ, ಸನ್ಯಾಸಿ ಕಾಷಾಯ ವಸ್ತ್ರದಿಂದಲೂ, ದಂಡದಿಂದಲೂ, ಪೂಜ್ಯನಾಗುತ್ತಾನೆ ||

ಮೂ|| ಉಪಚಾರಃಕೃತೋನೀಚೇಹ್ಯಪಚಾರಾಯಕಲ್ಪತೇ| ಪಯಃಪಾನಂ ಭುಜಂಗಾನಾಂಕೇವಲಂವಿಷವೃದ್ಧಿದಂ || ||ಟೀ|| ದುಷ್ಟರಲ್ಲಿ ಮಾಡಿದ ಉಪಚಾರವು ಅನಿಷ್ಟವನ್ನುಂಟುಮಾಡುತ್ತದೆ, ಹಾವು ಹಾಲು ಕುಡಿದಷ್ಟು ವಿಷವೃದ್ಧಿಯಾಗುತ್ತದೆ || ||೯೪||

ಮೂ || ಮಕ್ಷಿಕಾಮಶಕಾವೇಶ್ಯಾಮೂಷಕಾಯಾಚಕಾಸ್ತಥಾ | ಗಣಕಾಗ್ರಾಮಣೀಚೈವ ಸಪ್ತೈತೆಪರಭಕ್ಷಕಾಃ|| ||ಟೀ|| ನೊಣ, ಸೊಳ್ಳೆ, ಸೂಳೆ, ಹೆಗ್ಗಣ, ಯಾಚಕರು, ಶ್ಯಾನಭೋಗರು, ಗ್ರಾಮ ಪಟೇಲರು, ಇವರುಗಳು ಪರಭಕ್ಷರು || || ೯೬ ||

ಮೂ || ಋಣಂಯಾಚ್ಞಾಚವೃದ್ಧತ್ವಂಜಾರಚೋರದರಿದ್ರತಾ | ರೋಗಶ್ಚಿಷ್ಟಾನ್ನಭುಕ್ತಿಶ್ಚ ಪ್ಯಷ್ಟಾಕಷ್ಟಾಃಪ್ರಕೀರ್ತಿತಾ|| ||ಟೀ || ಸಾಲ, ದೇಹಿಯೆಂದು ಕೇಳುವಿಕೆಯು, ಮುಪ್ಪು, ಹಾದರ, ಕಳ್ಳತನ, ದಾರಿದ್ರ್ಯ, ರೋಗ, ಬಬ್ಬರು ತಿಂದು ಮಿಕ್ಕಿದ್ದನ್ನುಂಣುವಿಕೆಯು, ಇವೆಂಟೂ ಮಹಾಕಷ್ಟಗಳು||

ಮೂ || ಭೂಪ್ರದಕ್ಷಿಣಷಟ್ಕೇನಕಾಶೀಯಾತ್ರಾಯುತೇನಚ | ಸೇತುಸ್ನಾನಶತೈರ್ಯಚ್ಚತತ್ಫಲಂಮಾತೃವಂದನೆ|| || ಟೀ || ಆರುಸಾರಿ ಭೂಪ್ರದಕ್ಷಿಣ ಮಾಡುವದರಿಂದ ಯಾವ ಫಲ ಉಂಟಾಗುವದೋ ಹತ್ತು ಸಾವಿರಸರ್ತಿ ಕಾಶೀಯಾತ್ರೆ ಮಾಡುವದರಿಂದ ಯಾವ ಫಲ ಉಂಟೋ ನೂರುಸಾರಿ ಸೇತುಸ್ನಾನದಿಂ ಯಾವ ಫಲ ಉಂಟಾಗುವದೋ ಅವೆಲ್ಲವು ಒಂದು ಸಾರಿ ತಾಯಿಯನ್ನು ಪ್ರದಕ್ಷಿಣ ವಂದನೆಗಳಂ ಮಾಡುವದರಿಂದುಂಟಾಗುತ್ತದೆ. ||೯೮||

ಮೂ || ನಾನ್ನೋದಕಸಮಂದಾನಂನದ್ವಾದಶ್ಯಾಸಮಂವ್ರತಂ | ನಗಾಯಿತ್ರ್ಯಾಃಪರೋಮಂತ್ರೋನಮಾತುರ್ದೈವತಂಪರಂ|| ||ಟೀ|| ಅನ್ನೋದಕ ದಾನಗಳಿಗೆ ಸಮವಾದದಾನವಿಲ್ಲ. ದ್ವಾದಶಿಗೆ ಸಮವಾದ ವ್ರತವಿಲ್ಲ, ಗಾಯತ್ರಿಗೆ ಅಧಿಕವಾದ ಮಂತ್ರವಿಲ್ಲ, ತಾಯಿಗಿಂತ ಅಧಿಕವಾದ ದೈವವೂ ಇಲ್ಲ||

ಮೂ || ರಾಜವತ್ಪುತ್ರದಾರಾಶ್ಚ ಸ್ವಾಮಿವನ್ಮಿತ್ರಬಾಂಧವಾಃ | ಆಚಾರ್ಯವತ್ಸಭಾಸ್ತಾರಾಃಭಾಗ್ಯವಂತಂಸ್ತುವಂತಿಹಿ || || ಟೀ || ಧನವಂತನನ್ನು ಭಾರ್ಯಾಪುತ್ರರು ರಾಜನಂತೆ ಸ್ತುತಿಸುವದು, ಮಿತ್ರಬಾಂಧವರು ಪ್ರಭುವಿನಂತೆ ಸ್ತುತಿಸುವದು, ಸಭಾಜನರು ಆಚಾರ್ಯನಂತೆ ಸ್ತುತಿಸುವರು. || ೧೦೦||

ಮೂ|| ಕಪಿಲಾಕ್ಷೀರಪಾನೇನಬ್ರಾಹ್ಮಣೀಸಂಗಮೇನಚ | ವೇದಾಕ್ಷರವಿಚಾರೇಣಶೂದ್ರಶ್ಚಂಡಾಲತಾಂವ್ರಜೇತ್ || || ಟೀ || ಶೂದ್ರನು ಕಪಿಲೆಯ ಹಾಲನ್ನು ಕುಡಿಯುವದರಿಂದಲೂ, ಬ್ರಾಹ್ಮಣ ಹೆಂಗಿಸಿನ ಸಂಗದಿಂದಲೂ, ವೇದಾಕ್ಷರಗಳನ್ನು ನುಡಿಯುವದರಿಂದಲೂ, ಚಂಡಾಲನಾಗುವನು. ಈ ಕಾರ್ಯಗಳನ್ನೆಲ್ಲಾ ಶೂದ್ರರು ಮಾಡಬಾರದೆಂದು ಭಾವವು.

ಮೂ || ಲೋಕಯಾತ್ರಾಭಯಂಲಜ್ಜಾದಾಕ್ಷಿಣ್ಯಂಧರ್ಮಶೀಲತಾ | ಪಂಚಯಸ್ಮಿನ್ನವಿದ್ಯಂತೆನಕುರ್ಯಾತ್ತೇನಸಂಗಮಂ|| || ಟೀ || ಲೋಕಚರ್ಯೆಯು,

ಪರಭೀತಿಯು, ನಾಚಿಕೆಯು, ದಾಕ್ಷಿಣ್ಯವು, ಧರ್ಮಪ್ರವೃತ್ತಿಯು, ಈ ಐದು ಗುಣವು ಯಾವನಲ್ಲಿ ಇಲ್ಲವೋ ಅಂಥವನೊಂದಿಗೆ ಸ್ನೇಹವಂ ಮಾಡಲಾಗದು||

ಮೂ || ಬಾಲಸಖಿತ್ವಮಕಾರಣಹಾಸಸ್ತ್ರೀಷುವಿವಾದಮಸಜ್ಜನಸೇವಾ | ಗರ್ಧಭಯಾದಮಸಂಸ್ಕೃತವಾಣೀಷಟ್ಸುನರೋಲಘುತಾಮುಪಯಾತಿ ||

ಟೀ|| ಹುಡುಗರೊಂದಿಗೆ ಸ್ನೇಹವು, ನಿಮಿತ್ತವಿಲ್ಲದೆ ನಗೆಯು, ಹೆಂಗಸರೊಂದಿಗೆ ವಿವಾದವು, ದುಷ್ಟಜನಗಳ ಸೇವೆಯು, ಕತ್ತೆಯಮೇಲೆ ಹತ್ತುವಿಕೆಯು, ಅಶುದ್ಧವಾದ ಮಾತು ಈ ಆರುಗಳಿಂದ ಮನುಷ್ಯನು ಲಾಘವವನ್ನೈದುತ್ತಾನೆ

ಮೂ|| ವಿದ್ವಾನೆವವಿಜಾನಾತಿವಿದ್ವಜ್ಜನಪರಿಶ್ರಮಂ | ನಹಿವಂಧ್ಯಾವಿಜಾನಾತಿಗುರ್ವಿಂಪ್ರಸವವೇದನಾಂ || ||ಟೀ|| ವಿದ್ವಾಂಸರ ಶ್ರಮವನ್ನು ವಿದ್ವಾಂಸನೇ ಬಲ್ಲನು, ಇತರರರಿಯರು. ಅಧಿಕವಾದ ಪ್ರಸವವೇದನೆಯನ್ನು ಬಂಜೆಯು ತಿಳಿಯಲಾರಳು.

ಮೂ || ತ್ಯಜದುರ್ಜನಸಂಸರ್ಗಂಭಜಸಾಧುಸಮಾಗಮಂ | ಕುರುಪುಣ್ಯಮಹೋರಾತ್ರಂಸ್ಮರನಿತ್ಯಮನಿತ್ಯತಾಂ|| ||ಟೀ|| ಎಲೈ ಸ್ನೇಹಿತನೇ, ದುರ್ಜನ ಸಂಗವಂಬಿಡು, ಸತ್ಸಂಗತಿಯನ್ನು ಹೊಂದು, ರಾತ್ರಿಹಗಲೂ ಪುಣ್ಯವಂ ಮಾಡು, ತಾನು ಅಸತ್ಯವೆಂದು ನಿತ್ಯವೂ ಸ್ಮರಿಸುತ್ತಲಿರು ||೧೦೫||

ಮೂ|| ಮಾತಾನಿಂದತಿನಾಭಿನಂದತಿಪಿತಾಭ್ರಾತಾನಸಂಭಾಷತೆ | ಭೃತ್ಯಃಕುಪ್ಯತಿನಾಭಿಗಚ್ಛತಿಸುತಃಕಾಂತಾಚನಾಲಿಂಗತಿ | ತ್ಯಕ್ತ್ವಾದೂರತರಂಪ್ರಯಾತಿಚಸುಹೃದ್ಯಾಚ್ಞಭಯಾನ್ನಿರ್ಧನಂ | ತಸ್ಮಾದರ್ಥಮುಪಾರ್ಜಯಾಶುಸತತಂಹ್ಯರ್ಥೆಜಗದ್ವರ್ತತೆ|| ||ಟೀ|| ಧನವಿಲ್ಲದ ಮನುಷ್ಯನನ್ನು ತಾಯಿ ನಿಂದಿಸುವಳು, ತಂದೆಯುಪೇಕ್ಷಿಸುವನು, ಸಹೋದರರು ಮಾತಾಡರು, ಸೇವಕನು ಕೋಪಗೊಳ್ಳುವನು, ಮಗನು ಶೇರನು, ಮಡದಿಯು ಆಲಿಂಗಿಸಳು, ಯಾಚಿಸುವನೆಂಬ ಭಯದಿಂ ಸ್ನೇಹಿತನು ದೂರವಾಗಿ ಹೋಗುವನು. ಆದದರಿಂದ ಲೋಕವೆಲ್ಲವು ಅರ್ಥವನ್ನೇ ಕೊಂಡಾಡುವದಾಗಿ ಯಾವಾಗ್ಯೂ ಧನವನ್ನೇ ಸಂಪಾದಿಸಬೇಕು || ||೧೦೬||

ಮೂ || ಸಮುದ್ರಮಥನಾಲ್ಲೆಭೆ ಹರಿರ್ಲಕ್ಷ್ಮೀಂಹರೋವಿಷಂ | ಭಾಗ್ಯಂಫಲಂತಿಸರ್ವತ್ರನವಿದ್ಯಾನಚಪೌರುಷಂ|| || ಟೀ || ಸಮುದ್ರವಂ ಕಡೆಯಲೂ ವಿಷ್ಣು ಲಕ್ಷ್ಮಿಯಂ ಹೊಂದಿದನು. ಶಿವನು ವಿಷವಂ ಪಡೆದನು. ಆದದರಿಂದ ಭಾಗ್ಯದಿಂದಲೇ ಫಲವುಂಟಾಗುತ್ತದಲ್ಲದೆ ವಿದ್ಯೆಯೂ ಪೌರುಷವೂ ವ್ಯರ್ಥಗಳು. || ||೧೦೭||

ಮೂ|| ಆತುರೇಬಾಲಕೇವೃದ್ಧೇ ಬ್ರಹ್ಮೈಕಾಂತೇಚಯೋಗಿನಿ | ನಿಯಮೋನಾಸ್ತಿ ಸರ್ವತ್ರಸುರಾಪೇತಸ್ಕರೇವಿಟೇ|| ||ಟೀ|| ರೋಗಪೀಡಿತರಲ್ಲಿಯೂ, ಹುಡುಗರಲ್ಲಿಯೂ, ವೃದ್ಧರಲ್ಲಿಯೂ, ಬ್ರಹ್ಮಜ್ಞಾನಿಯಲ್ಲಿಯೂ, ಯೋಗಿಯಲ್ಲಿಯೂ, ಮದ್ಯಪಾಯಿಯಲ್ಲಿಯೂ, ಕಳ್ಳನಲ್ಲಿಯೂ, ವಿಟನಲ್ಲಿಯೂ, ನಿಯಮವಿಲ್ಲವು. ಅಂದರೆ ಇವರೆಲ್ಲರೂ ಕ್ರಮವಿಲ್ಲದೆ ಮನಸ್ಸಿಗೆ ತೋಚಿದಂತೆ ನಡೆಯುವರೆಂಬ ಭಾವವು || ||೧೦೭||

ಮೂ || ಏಕೋವಾಸಃಪತ್ತನೇವಾವನೇವಾ ಏಕೋಮಿತ್ರಂಭೂಪತಿರ್ವಾಯತಿರ್ವಾ | ಏಕೋನಾರೀಸುಂದರೀವಾದರೀವಾ ಏಕೋದೇವಃಕೇಶವೋವಾಶಿವೋವಾ|| ಟೀ|| ಪಟ್ಟಣದಲ್ಲಾದರೂ ವನದಲ್ಲಾದರೂ ವಾಸ ಮಾಡಬೇಕು. ಅರಸನಾದರೂ ಸನ್ಯಾಸಿಯಾದರೂ ಸ್ನೇಹಿತನಾಗಬೇಕು, ಸೌಂದರ್ಯವುಳ್ಳ ಸ್ತ್ರೀಯನ್ನಾದರೂ ಗುಹೆಯನ್ನಾದರೂ ಸೇರಬೇಕು. ವಿಷ್ಣುವನ್ನಾದರೂ ಶಿವನನ್ನಾದರೂ ಭಜಿಸಬೇಕು. ಅಂದರೆ, ಮನುಷ್ಯನು ಈ ಯೆರಡರಲ್ಲಿ ಒಂದನ್ನು ಹಿಡಿಯಬೇಕೆಂದು ಭಾವವು || || ೧೦೯ ||

ಮೂ || ಅಜಯುದ್ಧೇಋಷಿಶ್ರಾದ್ಧೇಪ್ರಭಾತಾಂಬುದಡಂಬರೇ | ಆರಂಭೇಸ್ಸುಮಹಾನಂತೇಚಾಯತೇಹಿ ಫಲಂಲಘು || ||ಟೀ|| ಕುರಿಹೋತುಗಳ ಕಾಗಳದಲ್ಲಿಯೂ, ಋಷಿಶ್ರಾದ್ಧದಲ್ಲಿಯೂ, ಬೆಳಗಿನ ಮೇಘಾಡಂಬರದಲ್ಲಿಯೂ, ಆರಂಭವಧಿಕವಾಗಿರ್ಪುದು. ಪರ್ಯವಸಾನದೊಳು ಫಲ ಅಲ್ಪವಾಗುವದು ||೧೧೦||

ಮೂ || ಹತಮಶ್ರೋತ್ರಿಯೆದಾನಂ ಹತಂಸೈನ್ಯಮನಾಯಕಂ | ಹತಾರೂಪವತೀವಂಧ್ಯಾ ಹತೋಯಜ್ಞಸ್ತ್ವದಕ್ಷಿಣಃ|| || ಟೀ || ಅಬ್ರಾಹ್ಮಣನಿಗೆ ಕೊಟ್ಟ ದಾನವು, ಅನಾಯಕವಾದ ಸೈನ್ಯವು, ಬಂಜೆಯಾದ ರೂಪವತಿಯು, ದಕ್ಷಿಣೆಯಿಲ್ಲದ ಯಜ್ಞವು, ಯಿವೆಲ್ಲವೂ ಕೆಟ್ಟು ಹೋಗುತ್ತವೆ. ಅಂದರೆ, ವ್ಯರ್ಥವೆಂಬ ಭಾವವು || || ೧೧೧ ||

ಮೂ || ಶ್ರಿಮತೋಭಿಕ್ಷುಕಸ್ಯಾಪಿ ಹೃದ್ಯಂಶ್ವಶುರಮಂದಿರಂ | ಕ್ಷೀರಾರ್ಣವೇಹರಿಶ್ಶೇತೇ ಶಂಭುರಾಸ್ತೇಹಿಮಾಲಯೇ || || ಟೀ || ಶ್ರೀಮಂತನಿಗಾದರೂ, ಭಿಕ್ಷುಕನಿಗಾದರೂ, ಮಾವನ ಮನೆಯು ಸಂತೋಷಕರವಾಗಿಹುದು. ಹ್ಯಾಗಂದರೆ, ಕ್ಷೀರಸಮುದ್ರದೊಳು ವಿಷ್ಣುವು ಮಲಗಿಹನು. . ಹಿಮಾಲಯದಲ್ಲಿ ಶಿವನಿರುತ್ತಾನೆ || || ೧೧೨ ||

ಮೂ || ಚಿಂತಾಯಾಶ್ಚಚಿತಾಯಾಶ್ಚ ಬಿಂದುಮಾತ್ರಂವಿಶೇಷತಃ | ಚಿತಾದಹತಿನಿರ್ಜೀವಂಚಿಂತಾಜೀವಂತುಮಪ್ಯಹೋ || || ಟೀ || ಚಿಂತೆಗೂ ಚಿತೆ

ಗೂ ಬಿಂದು ಮಾತ್ರವೇ ವಿಶೇಷವು. ಹ್ಯಾಗಂದರೆ,—ಚಿತೆಯು ಜೀವವಿಲ್ಲದ ವನನ್ನು ಸುಡುತ್ತದೆ, ಚಿಂತೆಯು ಬದಿಕಿರುವವನನ್ನು ಸುಡುತ್ತದೆ, ಇದೇ ವಿಶೇಷವು ॥ ॥ ೧೧೩ ॥

ಮೂ ॥ ಭವಿತವ್ಯಂಭವತ್ಯೇವನಾರಿಕೇಳಫಲಾಂಬುವತ್ । ಅಭವ್ಯಂನ ಭವತ್ಯೇವಗಜಭುಕ್ತಕಪಿತ್ಥವತ್ ॥ ॥ ಟೀ ॥ ತೆಂಗಿನಕಾಯೊಳು ನೀರುಂ ಟಾಗುವಂತೆ ಆಗತಕ್ಕದ್ದು ಆಗಿಯೇ ತೀರುತ್ತದೆ, ಆನೆ ನುಂಗಿದ ಬೇಲದಹಂ ಣಿನಂತೆ ಅಪ್ರಾಪ್ತಿಕಾಲದಲ್ಲಿ ಏನೂ ಇರುವದಿಲ್ಲವು ॥ ॥ ೧೧೪ ॥

ಮೂ ॥ ನೇಕ್ಷೇತೋದ್ಯಂತಮಾದಿತ್ಯಂನಾಸ್ತಂಯಂತಂಕದಾಚನ । ನೋಪರಕ್ತಂನವಾರಿಗ್ಥಂನಮಧ್ಯಂನಭಸೋಗತಂ ॥ ॥ ಟೀ ॥ ಉದಯಕಾಲದಲ್ಲಿ ಯೂ, ಅಸ್ತಮಯ ಕಾಲದಲ್ಲಿಯೂ, ಗ್ರಹಣ ಹಿಡಿದಿರುವಾಗಲೂ, ಜಲದಲ್ಲಿ ಪ್ರತಿಬಿಂಬದಲ್ಲಿಯೂ ಸೂರ್ಯನನ್ನು ನೋಡಕೂಡದು, ಆಕಾಶದ ಮಧ್ಯದಲ್ಲಿ ಇರುವಾಗಲೂ ಸೂರ್ಯನನ್ನು ನೋಡಲಾಗದು ॥ ॥ ೧೧೫ ॥

ಮೂ ॥ ವತ್ಸಾನಾಮಭಿದಾನೀಂಚಲಂಘಯೆನ್ನೈವಕರ್ಹಿಚಿತ್ । ನಾತ್ಮನಃಪ್ರತಿಬಿಂಬಂಚನಿರೀಕ್ಷೇತಾಂಭಸಿಸ್ಥಿತಂ॥ ॥ಟೀ॥ ಕರುವುಗಳ ಕಟ್ಟುವ ಹಗ್ಗವನ್ನು ದಾಟಕೂಡದು, ನೀರೊಳಗೆ ತನ್ನನೆರಳನ್ನು ನೋಡಬಾರದು ॥

ಮೂ ॥ ನಾಶ್ನೀಯಾದ್ಭಾರ್ಯಯಾಸಾರ್ಧಂನೈವಾಶ್ನಂತೀಂವಿಲೋಕಯೇತ್ । ಕ್ಷುವಂತೀಂಜೃಂಭಮಾಣಾಂಚನಪಶ್ಯೇತ್ಸುಖಮಾಸ್ಥಿತಾಂ ॥ ನಾಂಜಯಂತೀಂ ಸ್ವಕೇನೇತ್ರೇನಚಾಭ್ಯಕ್ತಾಮನಾವೃತಾಂ ॥ ಪ್ರಸುವಂತೀಂಸ್ವಕಾಂಭಾರ್ಯಾಂನ ಪುಮಾನವಲೋಕಯೇತ್ ॥ ॥ ಟೀ ॥ ಪುರುಷನು ಹೆಂಡತಿಯೊಡನೆ ಭೋಜನ ಮಾಡಬಾರದು. ಭೋಜನ ಮಾಡುವಂತಾವಳನ್ನು ನೋಡಬಾರದು. ಶೀನುವಲ್ಲಿಯೂ, ಆಕಳಿಕೆಯಲ್ಲಿಯೂ, ಸ್ವಸ್ಥವಾಗಿ ಕುಳಿತಿರುವಲ್ಲಿಯೂ, ಕಂಣಿಗೆ ಕಾಡಿಗೆ ಹಚ್ಚಿಸಿಕ್ಕೊಳ್ಳುವಲ್ಲಿಯೂ, ಯೆರಕೊಂಡು ಇರುವಲ್ಲಿಯೂ, ನಿರ್ವಾಣವಾಗಿ ಇರುವಲ್ಲಿಯೂ, ಪ್ರಸವ ಕಾಲದಲ್ಲಿಯೂ, ಹೆಂಡತಿಯನ್ನೋಡಬಾರದು ॥ ॥ ೧೧೭ ॥

ಮೂ ॥ ನಾನ್ನಮದ್ಯಾದೇಕವಾಸಾಃ ನವಿವಾಸಾಜಲಂವಿಶೇತ್ । ನೊತ್ಸಜೇದಪ್ಸುವಿಣ್ಮೂತ್ರೇವಮಾರ್ಗೇನಚಗೋವ್ರಜೇ ॥ ॥ ಟೀ ॥ ಒಂದೇ ವಸ್ತ್ರವನ್ನುಟ್ಟು ಭೋಜನ ಮಾಡಕೂಡದು. ಬತ್ತಲೆಯಾಗಿ ನೀರಿನಲ್ಲಿ ಮುಳಗಕೂಡದು, ಉದಕದಲ್ಲಿಯೂ, ದಾರಿಯಲ್ಲಿಯೂ, ದನಗಳ ಗೋಷ್ಠದಲ್ಲಿಯೂ, ಜಲಮಲಗಳಂ ಬಿಡಕೂಡದು ॥ ॥ ೧೧೮ ॥

ಮೂ || ವಿಣ್ಮೂತ್ರಯೋಸ್ಸಮುತ್ಸರ್ಗಂದಿವಾಕುರ್ಯ್ಯಾದುದಙ್ಮುಖಃ | ದಕ್ಷಿಣಾಭಿಮುಖೋರಾತ್ರೌಸಂಧ್ಯಯೋಶ್ಚಯಥಾದಿವಾ|| ||ಟೀ|| ಹಗಲು ಬಡಗಲ ಮುಖವಾಗಿ ಮಲಮೂತ್ರಗಳಂ ಬಿಡಬೇಕು. ರಾತ್ರಿಯಲ್ಲಿ ದಕ್ಷಿಣಾಭಿಮುಖವಾಗಿಯೂ ಸಂಜೆಯಲ್ಲಿ ಹಗಲಿನಂತೆಯೂ ಬಿಡಬೇಕು ||೧೧೯||

ಮೂ || ನಮುಖೇನಧಮೇದಗ್ನಿಂನಗ್ನಾಂನೇಕ್ಷೇತಚಸ್ತ್ರಿಯಂ | ನಾಮೇಧ್ಯಂಪ್ರಕ್ಷಿಪೇದಗ್ನೌನಚಪಾದೌಪ್ರತಾಪಯೇತ್ || ||ಟೀ|| ಬಾಯಿಂದ ಅಗ್ನಿಯನ್ನು ಊದಬಾರದು, ಬತ್ತಲೆಯಾದ ಸ್ತ್ರೀಯನ್ನೋಡಲಾಗದು, ಅಪರಿಶುದ್ಧ ವಸ್ತುವನ್ನು ಅಗ್ನಿಯಲ್ಲಿ ಹಾಕಬಾರದು, ಕಾಲನ್ನು ಬೆಂಕಿಯಲ್ಲಿ ಕಾಯಿಸಬಾರದು || ||೧೨೦||

ಮೂ || ನೈಕಸ್ಸುಪೇಚ್ಛೂನ್ಯಗೃಹೇಶಯಾನಂ ನಪ್ರಬೋಧಯೇತ್ | ನೋದಕ್ಯಾಚಾಭಿಭಾಷೇತನಾಪೃಷ್ಟಶ್ಚೋತ್ತರಂವದೇತ್ || ||ಟೀ|| ಶೂನ್ಯವಾದ ಮನೆಯಲ್ಲಿ ಯೊಬ್ಬನಾಗಿ ನಿದ್ರಿಸಕೂಡದು, ನಿದ್ರಿಸುವವನನ್ನು ಎಬ್ಬಿಸಬಾರದು, ಮುಟ್ಟಾದವಳೊಂದಿಗೆ ಮಾತಾಡಬಾರದು, ಒಬ್ಬರು ಕೇಳದೇ ತಾನಾಗಿ ಯುತ್ತರವನ್ನುಡಿಯಕೂಡದು || ||೧೨೧||

ಮೂ || ನಾಧಾರ್ಮ್ಮಿಕೇವಸೇದ್ಗ್ರಾಮೇ ನವ್ಯಾಧಿಬಹುಳೇತಥಾ | ನೈಕಃಪ್ರಪದ್ಯೇತಾಧ್ವಾನಂನಚಿರಂಪರ್ವ್ವತೇವಸೇತ್ || ||ಟೀ|| ಧರ್ಮಿಷ್ಠರಿಲ್ಲದೆಯೂ ಬಹು ರೋಗವುಳ್ಳದ್ದಾಗಿಯೂ ಇರುವ ಊರಲ್ಲಿ ವಾಸ ಮಾಡಕೂಡದು, ಏಕಾಕಿಯಾಗಿ ದಾರಿ ನಡಿಯಲಾಗದು, ಬೆಟ್ಟದಮೇಲೆ ಬಹುಕಾಲ ವಾಸ ಮಾಡಲಾಗದು || ||೧೨೨||

ಮೂ|| ಉಪಾನಹೌಚವಾಸಶ್ಚಸ್ರಜಂಕರಕಮೇವಚ | ಉಪವೀತಮಲಂಕಾರಂಧೃತಮನ್ಯೈರ್ನಧಾರಯೇತ್ || ||ಟೀ|| ಅನ್ಯರಿಂದ ಧರಿಸಲ್ಪಟ್ಟ ಪಾದರಕ್ಷೆಗಳನ್ನೂ, ವಸ್ತ್ರವನ್ನೂ, ಹೂವಿನ ಸರವನ್ನೂ, ತಂಬಿಗೆಯನ್ನೂ, ಯಜ್ಞೋಪವೀತವನ್ನೂ, ಅಲಂಕಾರವನ್ನೂ ಸಹ ಧರಿಸಕೂಡದು ||೧೨೩||

ಮೂ || ವೈರಿಣಂನೋಪಸೇವೇತಸಹಾಯಂಚೈವವೈರಿಣಃ | ಅಧಾರ್ಮ್ಮಿಕಂತಸ್ಕರಂಚಪರಸ್ಯೈಚನಯೋಷಿತಂ || ||ಟೀ|| ಶತ್ರುವನ್ನು, ಶತ್ರುವಿನ ಸಹಾಯವನ್ನು, ಪಾಪಿಷ್ಠರನ್ನು, ಕಳ್ಳನನ್ನು, ಅನ್ಯನ ಹೆಂಡತಿಯನ್ನು ಸಹ ಭಜಿಸಕೂಡದು || ||೧೨೪||

ಮೂ || ಕ್ಷತ್ರಿಯಂಪನ್ನಗಂಚೈವಬ್ರಾಹ್ಮಣಂಚಬಹುಶ್ರುತಂ | ನಾವಮನ್ಯೇತವೈಭೂಷ್ಣುಃಕೃಶಾನಪಿಕದಾಚನ || ||ಟೀ|| ಕ್ಷತ್ರಿಯನನ್ನು, ಸರ್ಪ

ವನ್ನು, ವೇದಶಾಸ್ತ್ರಸಂಪನ್ನನಾದ ಬ್ರಾಹ್ಮಣನನ್ನು, ಬಡವರನ್ನು ಸಹ ವೃದ್ಧಿ ಹೊಂದತಕ್ಕ ಪುರುಷನು ತಿರಸ್ಕರಿಸಲಾಗದು || ||೧೨೫||

ಮೂ || ಸತ್ಯಂಬ್ರೂಯಾತ್ಪ್ರಿಯಂಬ್ರೂಯಾನ್ನಬ್ರೂಯಾತ್ಸತ್ಯಮಪ್ರಿಯಂ | ಪ್ರಿಯಂಚನಾನೃತಂಬ್ರೂಯಾತ್ ಸೂಕ್ಷ್ಮಾಧರ್ಮಾಗತಿಃಪರಾಃ || ಟೀ || ಸತ್ಯವನ್ನುಡಿಯಬೇಕು, ಇಷ್ಟವಾದ ಮಾತನ್ನಾಡಬೇಕು, ಕೇಳುವವರಿಗೆ ಅನಿಷ್ಟವಾದ ಸತ್ಯವನ್ನುಡಿಯಲಾಗದು, ಇಷ್ಟವಾಗಿದ್ದರೂ ಅಸತ್ಯವನ್ನುಡಿಯಲಾಗದು. ಆದಪರಿಂದ ಧರ್ಮಗತಿಯು ಅತಿಸೂಕ್ಷ್ಮವಾಗಿರ್ಪುದು ||

ಮೂ || ಸುಲಭಾಃಪುರುಷಾಲೋಕೆ ಸತತಂಪ್ರಿಯವಾದಿನಃ | ಅಪ್ರಿಯಸ್ಯತುಪಥ್ಯಸ್ಯ ವಕ್ತಾಶ್ರೋತಾಚದುರ್ಲಭಃ || || ಟೀ || ಯಾವಾಗ್ಯು ಇಷ್ಟವಾದ ಮಾತನ್ನೇ ನುಡಿಯುವವರು ಬಹುಜನ ಶಿಕ್ಕುವರು, ಕೇಳುವವನಿಗೆ ಅನಿಷ್ಟವಾಗಿಯೂ ಕ್ಷೇಮಕರವಾಗಿಯೂ ಯಿರುವ ಮಾತನ್ನಾಡುವವನು, ಅದಂ ಕೇಳುವವರು ಸಹ ದುರ್ಲಭರಾಗಿರುತ್ತಾರೆ || || ೧೨೭ ||

ಮೂ || ಹೀನಾಂಗಾನತಿರಿಕ್ತಾಂಶ್ಚವಿದ್ಯಾಹೀನಾನ್ವಯೋಧಿಕಾರ್ನ | ಬಲರೂಪವಿಹೀನಾಂಶ್ಚಜಾತಿಹೀನಾಂಶ್ಚನಾಕ್ಷಿಪೇತ್ || || ಟೀ || ಬಡವಾದವರನ್ನಾಗಲಿ, ಅಂಗಹೀನರನ್ನಾಗಲಿ, ವಿದ್ಯಾಹೀನರನ್ನಾಗಲಿ, ಮುದುಕರನ್ನಾಗಲಿ, ಬಲರೂಪಗಳಿಲ್ಲದವನನ್ನಾಗಲಿ, ಜಾತಿಹೀನರನ್ನಾಗಲಿ, ಅಧಿಕ್ಷೇಪವ ಮಾಡಕೂಡದು || || ೧೨೮ ||

ಮೂ || ಅದ್ವಾರೇಣಚನಾತೀಯ್ಯಾಂಗ್ರಾಮಂವಾವೇಶ್ಮವಾವಿಶೇತ್ | ರಾತ್ರೌಚವೃಕ್ಷಮೂಲಾನಿನಾಶ್ರಯೇನ್ಮತಿಮಾನ್ನರಃ || || ಟೀ || ತನ್ನ ಮನೆಯನ್ನಾದರೂ, ಗ್ರಾಮವನ್ನಾದರೂ, ಬಾಗಿಲನ್ನು ತಪ್ಪಿಸಿ ಬೇರೆಮಾರ್ಗದಿಂ ಪ್ರವೇಶಿಸಕೂಡದು. ರಾತ್ರಿವೇಳೆ ಮರದ ಕೆಳಗೆ ಇರಕೂಡದು. ||೧೨೯||

ಮೂ || ವೃಥಾವೈರಂವಿವಾದಂಚನಕುರ್ಯಾತ್ಕೆನಚಿತ್ಸಹ | ಅರ್ಥಾಭಾವೆಪಿ ತತ್ಪುಂಸಾಮನರ್ಥಾಯೈವಕಲ್ಪತೆ || ||ಟೀ|| ವ್ಯರ್ಥವಾಗಿಯೊಬ್ಬರೊಂದಿಗೆ ವೈರವನ್ನೂ ವಿವಾದವನ್ನೂ ಸಹ ಮಾಡಲಾಗದು. ಅದರಿಂದ ಪ್ರಯೋಜನವಿಲ್ಲದಿದ್ದರೂ ಅನರ್ಥವು ತಪ್ಪುವದಿಲ್ಲ|| || ೧೩೦ ||

ಮೂ || ವಿದ್ಯಾಂರತ್ನಾನಿಧರ್ಮಂಚಶೌಚಂಶೀಲಂಸುಭಾಷಿತಂ | ವಿವಿಧಾನಿಚಶಿಲ್ಪಾನಿಸಮಾದೆಯಾನಿಸರ್ವತಃ|| || ಟೀ || ವಿದ್ಯೆಯನ್ನೂ, ಶ್ರೇಷ್ಠವಸ್ತುಗಳನ್ನೂ, ಧರ್ಮವನ್ನೂ, ಅಚಾರವನ್ನೂ, ಒಳ್ಳೆ ನಡತೆಯನ್ನೂ, ಒಳ್ಳೆ ಮಾತನ್ನೂ, ನಾನಾವಿಧ ಶಿಲ್ಪಗಳನ್ನೂ ಎಲ್ಲಗಡೆಯಿಂದಲೂ ಸಂಪಾದಿಸಬಹುದು || || ೧೩೧ ||

ಮೂ || ದುಷ್ಕುಲಾವುದ್ವಹೆಯುರ್ಯೇ ಭಾರ್ಯಾಂಮೋಹಾದ್ದ್ವಿಜಾತಯಃ | ತೇ ಹಿಸ್ಯಾನೆವಗೊತ್ರಾಣಿಪ್ರಾಪಯಂತಿ ಹಶೂದ್ರತಾಂ || || ಟೀ || ಯಾವಬ್ರಾಹ್ಮಣರು ಅಜ್ಞಾನದಿಂ ದುಷ್ಕುಲಿಯಾದ ಹೆಂಣನ್ನು ಮದುವೆ ಮಾಡಿಕೊಳ್ಳುತ್ತಾರೋ ಅವರ ವಂಶದಲ್ಲಿಹುಟ್ಟಿದವರೆಲ್ಲರೂ ಶೂದ್ರರಾಗುತ್ತಾರೆ ||೧೪೨||

ಮೂ || ಪರಾಯತ್ತಂಹಿಯತ್ಕರ್ಮತತ್ಪ್ರಯತ್ನೇನವಿವರ್ಜಯೇತ್ | ಆತ್ಮಾಯತ್ತಂಹಿಯದ್ಯತ್ಸ್ಯಾತ್ತತ್ತತ್ಕುರ್ಯಾದ್ವಿಚಕ್ಷಣಃ || ||ಟೀ|| ಯಾವಕಾರ್ಯವು ಪರಾಯತ್ತವಾಗಿಹುದೋ ಅದನ್ನು ಪ್ರಯತ್ನದಿಂ ಬಿಡಬೇಕು. ಸ್ವವಶವಾದದ್ದು ಯಾವದುಂಟೋ ಅದನ್ನು ಪ್ರಯತ್ನದಿಂ ಮಾಡಬೇಕು ||೧೪೪||

ಮೂ || ಪರಾಯತ್ತಂಹಿದುಃಖ್ಖಾಯಸ್ವಾಯತ್ತಂಸುಖಕಾರಣಂ | ಎತದ್ವಿದ್ಯಾತ್ಸಮಾಸೇನಲಕ್ಷಣಂಸುಖದುಃಖ್ಖಯೋಃ || || ಟೀ || ಪರಾಯತ್ತವು ದುಃಖ್ಖಕರವು, ಸ್ವಾಯತ್ತವು ಸುಖಕರವಾಗಿರ್ಪುದೆಂದು ಸಂಗ್ರಹದಿಂ ಸುಖ ದುಃಖ್ಖ ಲಕ್ಷಣಗಳಂ ತಿಳಿವುದು || ||೧೪೩ ||

ಮೂ || ಅದ್ರೋಹೇಣಚಭೂತಾನಾಮಲ್ಪದ್ರೋಹೇಣವಾಪುನಃ | ಯಾವೃತ್ತಿಸ್ತಾಂಸಮಾಸ್ಥಾಯವಿಪ್ರೋಜೀವೇದನಾಪದಿ || || ಟೀ || ಬ್ರಾಹ್ಮಣನು ತನಗಾಪತ್ತಿಲ್ಲದೇ ಇದ್ದಾಗ ಪ್ರಾಣಿಗಳಿಗೆ ದ್ರೋಹವಿಲ್ಲದೆಯೂ ಅಥವಾ ಸ್ವಲ್ಪ ದ್ರೋಹವುಳ್ಳದ್ದಾಗಿಯಾದರೂ ಯಾವ ವೃತ್ತಿ ಇಹುದೋ ಅದರಿಂದ ಜೀವಿಸಬಹುದು || || ೧೪೫ ||

ಮೂ|| ಋತಾಮೃತಾಭ್ಯಾಂಜೀವೇತ್ತಮೃತೇನಪ್ರಮೃತೇನವಾ| ಸತ್ಯಾನೃತಾಭ್ಯಾಂಜೀವೇತನಶ್ವವೃತ್ತ್ಯಾಕದಾಚನ|| || ಟೀ || ಬತ್ತಗಳಂ ಕುಟ್ಟುವಾಗ ಒರಳಿನ ಕೆಳಗೆ ಬಿದ್ದಿರುವ ಕಾಳುಗಳನ್ನು ದುತಿಂದು ಜೀವಿಸುವದು ಋತವು, ಅದರಿಂದಲಾದರೂ ಜೀವಿಸಬಹುದು. ಶುದ್ಧವಾಗಿ ಯಾಚಿಸದೆ ಇರುವದು ಅಮೃತವು, ಅದರಿಂದಲೂ ಜೀವಿಸಬಹುದು. ಅಥವಾ ಯಾಚನಾವೃತ್ತಿಯಿಂದಲಾದರೂ ಕೃಷಿಯಿಂದಲಾದರೂ ವರ್ತಕತನದಿಂದಲಾದರೂ ಜೀವಿಸಬಹುದು. ಶ್ವವೃತ್ತಿಯಾದ ಚಾಕರಿಯಿಂದ ಮಾತ್ರ ಯಾವಾಗ್ಯೂ ಜೀವಿಸಬಾರದು ||

ಮೂ|| ವಿಪ್ರಾಣಾಂಜ್ಞಾನತೋಜ್ಯೈಷ್ಠ್ಯಂಕ್ಷತ್ರಿಯಾಣಾಂತುವೀರ್ಯತಃ|| ವೈಶ್ಯಾನಾಂಧನಧಾನ್ಯಾಭ್ಯಾಂಶೂದ್ರಾಣಾಮೇವಜನ್ಮತಃ || || ಟೀ|| ಬ್ರಾಹ್ಮಣರಲ್ಲಿ ಜ್ಞಾನವುಳ್ಳವನು ದೊಡ್ಡವನು, ಕ್ಷತ್ರಿಯರಲ್ಲಿ ಪರಾಕ್ರಮವುಳ್ಳವನು, ವೈಶ್ಯರಲ್ಲಿ ಧನಧಾನ್ಯವುಳ್ಳವನು, ಶೂದ್ರರಲ್ಲಿ ಆಯುಸ್ಸು ಅಧಿಕವಾದವನು ಇವರೇ ಜ್ಯೇಷ್ಠರೆಂದರಿವುದು || || ೧೪೭ ||

ಮೂ|| ಧನಂಬಂಧುತ್ವವಯಸ್ಸಿಃಕರ್ಮ ವಿದ್ಯಾಚಪಂಚಮಿ। ಏತಾನಿಮಾನಸ್ಥಾನಾನಿಗರಿಯೋಹ್ಯುತ್ತರೊತ್ತರಂ || || ಟೀ || ಧನವು, ಬಂಧುತ್ವವು ವಯಸ್ಸು, ಕರ್ಮವು, ಐದನೇದು ವಿದ್ಯೆಯು, ಇವೆಲ್ಲವೂ ಬಹುಮಾನದ ಸ್ಥಾನಗಳು ಮತ್ತು ಒಂದಕ್ಕೊಂದು ಅಧಿಕವಾಗಿಹುದು || || ೧೪೩ ||

ಮೂ || ತರುಣಂಸರ್ಷಪಶಾಕಂನವೌದನಂಪಿಚ್ಛಿಲಾನಿಚದಧೀನಿ। ಅಲ್ಪವ್ರಯೇಣಸುಂದರಿಗ್ರಾಮ್ಯಜನೊಮೃಷ್ಟಮಶ್ನಾತಿ || || ಟೀ || ಗ್ರಾಮವಾಸಿಗಳು ಎಳೆಯವಾದ ಕಾಯಿಸೊಪ್ಪುಗಳನ್ನು ಹೊಸ ಅಕ್ಕಿ ಅನ್ನವನ್ನು ಹೊಸದಾದ ಕೆನೆಮೊಸರನ್ನು ಸಹ ಅಲ್ಪವಾದ ವೆಚ್ಚದಿಂದ ರುಚಿಯಾಗಿ ಭುಜಿಸುವರು|| || ೧೪೪ ||

ಮೂ|| ವಿದ್ಯಾನಾಮನರಸ್ಯರೂಪಮಧಿಕಂಪ್ರಚ್ಛನ್ನಗುಪ್ತಂಧನಂವಿದ್ಯಾಭೋಗಕರೀಯಶಸ್ಸುಖಕರೀವಿದ್ಯಾಗುರೂಣಾಂಗುರುಃ। ವಿದ್ಯಾಬಂಧುಜನೊವಿದೇಶಗಮನೆವಿದ್ಯಾಪರಾದೇವತಾವಿದ್ಯಾರಾಜ ಸುಪೂಜ್ಯತೆನಹಿಧನಂವಿದ್ಯಾವಿಹೀನಃಪಶುಃ || || ಟೀ || ಮನುಷ್ಯನಿಗೆ ವಿದ್ಯೆಯೇ ರೂಪವು, ವಿದ್ಯೆಯೇ ಗುಪ್ತವಾದ ಧನವು, ಪರದೇಶದೊಳು ವಿದ್ಯೆಯೇ ಬಂಧುಜನವು, ವಿದ್ಯೆಯೇ ಭೋಗ ಯಶಸ್ಸುಗಳನ್ನುಂಟುಮಾಡುವದು, ವಿದ್ಯೆಯೇ ದೊಡ್ಡವರಿಗಿಂತಲೂ ದೊಡ್ಡದು, ವಿದ್ಯೆಯೇ ಪರದೇವತೆಯು, ರಾಜಾಸ್ಥಾನದಲ್ಲಿ ವಿದ್ಯೆಯೇ ಪೂಜ್ಯನಾಗುವದು, ಧನವಲ್ಲವು. ಆದದರಿಂದ ವಿದ್ಯಾಹೀನನೇ ಪಶುಪ್ರಾಯವಾಗುತ್ತಾನೆ|| || ೧೪೫ ||

ಮೂ|| ಕ್ಷಾಂತಿಶ್ಚೇತ್ಕವಚೇನಕಿಂಕಿಮರಿಭಿಃಕ್ರೋಧೋಸ್ತಿಚೆದ್ದೇಹಿನಾಂ। ಜ್ಞಾತಿಶ್ಚೇದನಲೇನಕಿಂಯದಿಸುಹೃದ್ದಿವ್ಯೌಷಧೈಃಕಿಂಫಲಂ || ಕಿಂಸರ್ಪೈರ್ಯದಿದುರ್ಜನಾಃಕಿಮುಧನೈರ್ವಿದ್ಯಾನವದ್ಯಾಯದಿ। ವ್ರೀಡಾಚೇತ್ಕಿಮುಭೂಷಣೈಸ್ಸುಕವಿತಾಯದ್ಯಸ್ತಿರಾಜ್ಯೇನಕಿಂ || || ಟೀ || ಕ್ಷಮೆಯುಂಟಾದರೆ ಕವಚವೇತಕೆ, ಕ್ರೋಧವಿದ್ದರೆ ಶತ್ರುವೇತಕೆ, ಜ್ಞಾತಿ ಯಿದ್ದರೆ ಬೆಂಕಿಯಾತಕೆ, ಸನ್ಮಿತ್ರನಿದ್ದರೆ ಔಷಧವೇತಕೆ, ದುರ್ಜನನಿದ್ದರೆ ಸರ್ಪಗಳೇತಕೆ, ಒಳ್ಳೆವಿದ್ಯೆ ಇದ್ದರೆ ಧನವೇತಕೆ, ನಾಚಿಗೆ ಯಿದ್ದರೆ ಕುಲಸ್ತ್ರೀಯರಿಗೆ ಒಡವೆಯಾತಕೆ, ಸುಕವಿತ್ವವಿದ್ದರೆ ರಾಜ್ಯವೇತಕೆ, ಅಂದರೆ ಕ್ಷಮಾದಿಗುಣಗಳೇ ಸರ್ವೋತ್ತಮಗಳೆಂದು ಭಾವವು || || ೧೪೬ ||

ಮೂ || ಜಾಡ್ಯಂಧಿಯೊಹರತಿಸಿಂಚತಿವಾಚಿಸತ್ಯಂ। ಮಾನೊನ್ನತಿಂದಿಶತಿಪಾಪಮಪಾಕರೊತಿ || ಚೆತಃಪ್ರಸಾದಯತಿದಿಕ್ಷುತನೊತಿಕೀರ್ತಿಂ। ಸತ್ಸಂ

ಗತಿಃಕಥಯಕಿನ್ನಕರೋತಿಪುಂಸಾಂ|| || ಟೀ || ಬುದ್ಧಿಯು ಜಡತ್ವವನ್ನು ಹರಿಸುತ್ತದೆ, ವಾಕ್ಕಿನಲ್ಲಿ ಸತ್ಯವನ್ನು ಯಿರಿಸುತ್ತದೆ, ಮಾನವನ್ನುಂಟುಮಾಡುತ್ತದೆ, ಪಾಪವಂ ಪರಿಹರಿಸುತ್ತದೆ, ಮನಸ್ಸನ್ನು ಪ್ರಸನ್ನವ ಮಾಡುತ್ತದೆ, ದಿಕ್ಕುಗಳಲ್ಲಿ ಕೀರ್ತಿಯ ವಿಸ್ತಾರವನ್ನು ಮಾಡುತ್ತದೆಯಾಗಿ ಸಜ್ಜನ ಸಹವಾಸವು ಯಾವಗುಣಗಳಂ ಸಾಧಿಸುವದಿಲ್ಲವು, ಸರ್ವಸುಗುಣಗಳನ್ನೂ ಸಾಧಿಸುತ್ತದೆ ಎಂದು ಭಾವವು || || ೧೪೧ ||

ಮೂ || ದೌರ್ಮಂತ್ರ್ಯಾನ್ನೃಪತಿರ್ವಿನಶ್ಯತಿಯತಿಸ್ಸಂಗಾತ್ಸುತೋಲಾಲನಾದ್ವಿಪ್ರೋನಧ್ಯಯನಾತ್ಕುಲಂಕುತನಯಾಚ್ಛೀಲಂಖಲೋಪಾಸನಾತ್ | ಹ್ರೀರ್ಮದ್ಯಾದನವೇಕ್ಷಣಾದಪಿಕೃಷಿ ಸ್ನೇಹಃಪ್ರವಾಸಾಶ್ರಯಾತ್ ಮೈತ್ರೀಚಾಪ್ರಣಯಾತ್ಸಮೃದ್ಧಿರನಯಾತ್ತ್ಯಾಗಾತ್ಪ್ರಮಾದಾದ್ಧನಂ || || ಟೀ || ದುರಾಲೋಚನೆಯಿಂದರಸನು, ಸಂಗದಿಂ ಸನ್ಯಾಸಿಯು, ಲಾಲನೆಯಿಂದ ಮಗನು, ವೇದಾಧ್ಯಯನವಿಲ್ಲದೆ ಇರುವದರಿಂದ ವಿಪ್ರನು, ದುಷ್ಪುತ್ರನಿಂದ ಕುಲವು, ದುಷ್ಟರ ಸೇವೆಯಿಂದಾಚಾರವು, ಮದ್ಯದಿಂದ ನಾಚಿಗೆಯು, ನೋಡದೆ ಬಿಸುವದರಿಂದ ಕೃಷಿಯು, ದೂರದೇಶವಾಸದಿಂ ಸ್ನೇಹವು, ನಿರ್ದಾಕ್ಷಿಣ್ಯದಿಂ ಮೈತ್ರಿಯು, ಅಧರ್ಮದಿಂ ಸಮೃದ್ಧಿಯು, ವ್ರಯದಿಂದಲೂ, ಬುದ್ಧಿಪ್ರಮಾದದಿಂದಲೂ ಧನವು, ಇವುಗಳೆಲ್ಲಾ ನಷ್ಟವಾಗುತ್ತದೆ || ||೧೪೨||

ಮೂ || ದಾನಂಭೋಗೋನಾಶಸ್ತಿಸ್ರೋಗತಯೋಭವಂತಿವಿತ್ತಸ್ಯ | ಯೋನದದಾತಿನಭುಂಕ್ತೆತಸ್ಯತೃತೀಯಾಗತಿರ್ಭವತಿ || || ಟೀ || ಧನಕ್ಕೆ ದಾನ, ಭೋಗ, ನಾಶ, ಎಂಬದಾಗಿ ಮೂರುಗತಿಗಳಿವೆ, ಯಾವನು ಅದನ್ನು ಅನ್ಯರಿಗೆ ಕೊಡದೆಯೂ ತಾನು ಅನುಭವಿಸದೆಯೂ ಇರುತ್ತಾನೋ ಅವನ ಧನಕ್ಕೆ ಮೂರನೇ ಗತಿಯೇಯುಂಟಾಗುತ್ತದೆ || ||೧೪೩||

ಮೂ || ಯಸ್ಯಾಸ್ತಿವಿತ್ತಂಸನರಃ ಕುಲೀನಸ್ಸಪಂಡಿತಸ್ಸಶ್ರುತವಾನ್‌ಗುಣಜ್ಞಃ | ಸಏವವಕ್ತಾಸಚದರ್ಶನೀಯಸ್ಸರ್ವೇಗುಣಾಃಕಾಂಚನಮಾಶ್ರಯಂತಿ || ಟೀ || ಯಾವನಿಗೆ ಧನವಿದೆಯೋ ಅವನೇ ಸತ್ಕುಲದಲ್ಲಿ ಹುಟ್ಟಿದವನು, ಅವನೇ ಪಂಡಿತನು, ಅವನೇ ಶಾಸ್ತ್ರಜ್ಞನು, ಅವನೇ ಗುಣಜ್ಞನು, ಅವನೇ ಚನ್ನಾಗಿ ಮಾತಾಡುವವನು, ಅವನೇ ಸುಂದರನು, ಆದದರಿಂದ ಸರ್ವಗುಣಗಳೂ ಧನವನ್ನಾಶ್ರಯಿಸಿ ಇವೆ || || ೧೪೪ ||

ಮೂ || ಚತ್ವಾರೋವಿತ್ತದಾಯಾದಾಃಧರ್ಮಾಗ್ನಿನೃಪತಸ್ಕರಾಃ | ಜ್ಯೇಷ್ಠಪುತ್ರಾಪಮಾನೇನತ್ರಯಃಕುಪ್ಯಂತಿಸೋದರಾಃ || ||ಟೀ|| ಧನಕ್ಕೆ ಧರ್ಮವು, ಅಗ್ನಿಯು, ರಾಜನು, ಕಳ್ಳನು ಎಂಬದಾಗಿ ನಾಲ್ವರು ಮಕ್ಕಳುಂಟು. ಇವ

ರುಗಳು ಹಿರಿಯ ಮಗನಿಗೆ ಅವಮಾನವಂ ಮಾಡಿದರೆ, ಕಡೆಯ ಮೂವ್ವರೂ ಕೋಪಿಸಿಕೊಳ್ಳುವರು ॥ ॥ ೧೪೫ ॥

ಮೂ ॥ ದುರ್ಜನಃಪರಿಹರ್ತವ್ಯೋವಿದ್ಯಯಾಭೂಷಿತೋಪಿಸನ್ । ಮಣಿನಾಭೂಷಿತಸ್ಸರ್ಪಃ ಕಿಮಸೌನಭಯಂಕರಃ ॥ ॥ ಟೀ ॥ ದುಷ್ಟನು ವಿದ್ಯಾವಂತನಾಗಿದ್ದರೂ, ಅವನಂ ಬಿಡಬೇಕು. ರತ್ನಭೂಷಿತವಾಗಿದ್ದರೂ ಸರ್ಪ ಭಯಂಕರವಲ್ಲವೆ? ॥ ೧೪೬ ॥

ಮೂ ॥ ಜಾಡ್ಯಂಹ್ರೀಮತಿಗಣ್ಯತೇವ್ರತಪರೆದಂಭಶ್ಶುಚೌಕೈತವಂಶೂರೆನಿರ್ಘೃಣತಾಮುನೌವಿಮತಿತಾದೈನ್ಯಂಪ್ರಿಯಾಲಾಪಿನಿ । ತೇಜಸ್ವಿನ್ಯವಲಿಪ್ತತಾಮುಖರತಾವಕ್ತ್ರವ್ಯಶಕ್ತಿಸ್ಥಿರೇತತ್ಕೋನಾಮಗುಣೋಭವೇತ್ಸುಗುಣಿನಾಂಯೋದುರ್ಜನೈರ್ನಾಂಕಿತಃ ॥ ॥ ಟೀ ॥ ನಾಚಿಕೆಯುಳ್ಳವನಲ್ಲಿ ಜಡತ್ವವು, ವ್ರತಶೀಲನಲ್ಲಿ ಡಂಭವು, ಆಚಾರಶೀಲನಲ್ಲಿ ಕಪಟವು, ಶೂರನಲ್ಲಿ ನಿರ್ದಯತ್ವವು, ಮುನಿಯಲ್ಲಿ ನಿರ್ದಯತ್ವವು, ಪ್ರಿಯವಾಗಿ ಮಾತಾಡುವನಲ್ಲಿ ದೀನತ್ವವು, ತೇಜಸ್ವಿಯಾದವನಲ್ಲಿ ಗರ್ವವು, ವಾಚಾಲಕನಲ್ಲಿ ಬಹುಭಾಷಿತ್ವವು, ಧೈರ್ಯವುಳ್ಳವನಲ್ಲಿ ಅಶಕ್ತಿಯು ಸಹಾ ಗಣಿಸಲ್ಪಡುತ್ತದೆಯಾಗಿ ದುರ್ಜನರಿಂದ ದೂಷಿಸಲ್ಪಡದೇ ಇರುವ ಸುಗುಣವು ಯಾವದೂ ಇಲ್ಲವು ॥ ॥ ೧೪೭ ॥

ಮೂ ॥ ಏತೇಸತ್ಪುರುಷಾಃಪರಾರ್ಥಘಟಕಾಸ್ಸ್ವಾರ್ಥಾನ್ಪರಿತ್ಯಜ್ಯಯೇಸಾಮಾನ್ಯಾಸ್ತುಪರಾರ್ಥಮುದ್ಯಮಭೃತಸ್ಸ್ವಾರ್ಥಾವಿರೋಧೇನಯೇ । ತೇಮೀಮಾನುಷರಾಕ್ಷಸಾಃ ಪರಹಿತಂಸ್ವಾರ್ಥಾಯನಿಘ್ನಂತಿಯೇಯೇತುಘ್ನಂತಿ ನಿರರ್ಥಕಂ ಪರಹಿತಂತೇಕೇನಜಾನೀಮಹೇ ॥ ॥ ಟೀ ॥ ತನ್ನ ಪ್ರಯೋಜನವನ್ನು ಬಿಟ್ಟಾದರೂ ಪರಾರ್ಥವನ್ನು ಸಾಧಿಸುವರು ಸತ್ಪುರುಷರು. ತನ್ನ ಪ್ರಯೋಜನಕ್ಕೆ ಹಾನಿ ಇಲ್ಲದೆ ಪರಪ್ರಯೋಜನವನ್ನುಂಟುಮಾಡುವವರು ಮಧ್ಯಮರು. ಸ್ವಪ್ರಯೋಜನಕ್ಕಾಗಿ ಅನ್ಯರ ಪ್ರಯೋಜನವಂ ಕೆಡಿಸುವರಧಮರು, ಅವರೇ ನರರಾಕ್ಷಸರು. ಸ್ವಪ್ರಯೋಜನವಂ ಕೆಡಿಸಿಕೊಂಡು ಅನ್ಯರ ಪ್ರಯೋಜನನನ್ನು ಕೆಡಿಸುವವರೆಂತವರೋ ತಿಳಿಯಲಾರೆವು ॥ ॥ ೧೪೮ ॥

ಮೂ ॥ ಲೋಭಶ್ಚೇದಗುಣೇನಕಿಂಪಿಶುನತಾಯದ್ಯಸ್ತಿಕಿಂಪಾತಕೈಃಸತ್ಯಂಚೇತ್ತಪಸಾಚಕಿಂಶುಚಿಮನೋಯದ್ಯಸ್ತಿತೀರ್ಥೇನಕಿಂ । ಸೌಜನ್ಯಂಯದಿಕಿಂಬಲೇನಮಹಿಮಾಯದ್ಯಸ್ತಿಕಿಂಕತ್ಥನೈಸ್ಸದ್ವಿದ್ಯಾಯದಿಕಿಂಧನೈರಪಯಶೋಯದ್ಯಸ್ತಿಕಿಂಮೃತ್ಯುನಾ ॥ ॥ ಟೀ ॥ ಲೋಭವಿದ್ದರೆ ಬೇರೆ ದುರ್ಗುಣ ಬೇಡವು. ಪಿಶುನತ್ವವಿದ್ದರೆ ಬೇರೆ ಪಾಪವೇತಕೆ? ಸತ್ಯ ಒಂದಿದ್ದರೆ ತಪದಿಂದೇನು? ಮನಶ್ಶುದ್ಧಿ ಇದ್ದರೆ ಪುಣ್ಯತೀರ್ಥದಿಂದೇನು? ಸೌಜನ್ಯವಿದ್ದರೆ ಬಲದಿಂ ಪ್ರ

ಯೋಜನವೇನು? ಸ್ವತಸ್ಸಿದ್ಧವಾದ ಮಹಾತ್ಮ್ಯವಿದ್ದರೆ ಬೊಗಳಿಕೊಳ್ಳಲೇಕೆ? ಒಳ್ಳೇ ವಿದ್ಯೆ ಇದ್ದರೆ ಧನವೇತಕೆ? ಅಪಕೀರ್ತಿ ಇದ್ದರೆ ಮೃತ್ಯು ಬೇರೆಯೇತಕೆ || || ೧೪೯ ||

ಮೂ || ಪದ್ಮಾಕರಂದಿನಕರೋವಿಕಚಂಕರೋತಿಚಂದ್ರೋವಿಕಾಸಯತಿಕೈರವಚಕ್ರವಾಳಂ | ನಾಭ್ಯರ್ಥಿತೋಜಲಧರೋಪಿಜಲಂದದಾತಿಸಂತಸ್ಸ್ವಯಂಪರಹಿತೇವಿಹಿತಾಭಿಯೋಗಾಃ || || ಟೀ || ಸೂರ್ಯನು ಕಮಲಗಳಿಗೆ ವಿಕಾಸವನ್ನುಂಟುಮಾಡುತ್ತಾನೆ. ಚಂದ್ರನು ನೈದಿಲೆಗಳಿಗೆ ವಿಕಾಸವನ್ನಿಯ್ಯುತ್ತಾನೆ. ಯಾರೂ ಯಾಚಿಸದೇ ಇದ್ದರೂ ಮೇಘವು ವರ್ಷಿಸುತ್ತದೆ. ಆದದರಿಂದ ಸತ್ಪುರುಷರು ತಾವಾಗಿಯೇ ಪರೋಪಕಾರದಲ್ಲಿ ಪ್ರವರ್ತಿಸುವರು ||೧೫೦||

ಮೂ|| ಗಜಭುಜಂಗವಿಹಂಗಮಬಂಧನಂಶಶಿದಿವಾಕರಯೋರ್ಗ್ರಹಪೀಡನಂ | ಮತಿಮತಾಂಚಸಮೀಕ್ಷ್ಯದರಿದ್ರತಾಂವಿಧಿರಹೊಬಲವಾನಿತಿಮೇಮತಿಃ|| ಟೀ|| ಆನೆ, ಸರ್ಪ, ಪಕ್ಷಿ ಇವುಗಳು ಮನುಷ್ಯರ ಕೈಯಲ್ಲಿ ಶಿಕ್ಕಿಬೀಳುವದನ್ನೂ, ಚಂದ್ರ ಸೂರ್ಯರಿಗೆ ರಾಹುಪೀಡೆಯುಂಟಾಗುವದನ್ನೂ, ಬುದ್ಧಿವಂತರು ದರಿದ್ರರಾಗಿರುವದನ್ನೂ ನೋಡಿ ದೈವವೇ ಬಲೀಯ್ಯವೆಂದು ತೋರುತ್ತದೆ.

ಮೂ|| ನೈವಾಕೃತಿಃಫಲತಿನೈವಕುಲಂನಶೀಲಂವಿದ್ಯಾಪಿನೈವನಚಯತ್ನಕೃತಾಪಿಸೇವಾ | ಭಾಗ್ಯಾನಿಪೂರ್ವತಪಸಾಖಲುಸಂಚಿತಾನಿ ಕಾಲೇಫಲಂತಿಪುರುಷಸ್ಯಯಥೈವವೃಕ್ಷಾಃ|| ||ಟೀ|| ಮನುಷ್ಯನಿಗೆ ಆಕಾರವು, ಕುಲವು, ಆಚಾರವು, ವಿದ್ಯೆಯು, ಆಶ್ರಯವು, ಇವುಗಳೆಲ್ಲವೂ ಪ್ರಯೋಜನಕರವಾಗುವದಿಲ್ಲ. ಪೂರ್ವತಪಸ್ಸಿನಿಂದ ಸಂಪಾದಿಸಲ್ಪಟ್ಟ ಭಾಗ್ಯವೇ ವೃಕ್ಷಗಳಂತೆ ಆಯಾ ಕಾಲದಲ್ಲಿ ಫಲ ಪ್ರದವಾಗುತ್ತದೆಯಾಗಿ ಇವೆಲ್ಲವೂ ವ್ಯರ್ಥವೆಂದುಭಾವವು ||

ಮೂ || ಮುಖಂಪ್ರಸನ್ನಂವಿಮಲಾಚದೃಷ್ಟಿಸ್ತಥಾನುರಾಗೋಮಧುರಾಚವಾಣೀ| ಸ್ನೇಹೋಧಿಕಸ್ಸಂಭ್ರಮದರ್ಶನಂಚಸದಾನುರಕ್ತಸ್ಯಜನಸ್ಯಲಕ್ಷಣಂ|| ಟೀ || ಮುಖ ಪ್ರಸನ್ನತೆಯು, ಪ್ರಸನ್ನದೃಷ್ಟಿಯು, ಅನುರಾಗವು, ಮಧುರವಚನವು, ಅಧಿಕಸ್ನೇಹವು, ಸಂಭ್ರಮದೊಡನೇ ನೋಟವು, ಇವೆಲ್ಲವೂ ಪ್ರೀತಿಯುಳ್ಳ ಜನದ ಲಕ್ಷಣಗಳಾಗಿಹವು || || ೧೫೩ ||

ಮೂ || ಗೋಭಿರ್ವಿಪ್ರೈಶ್ಚವೇದೈಶ್ಚಸತೀಭಿಸ್ಸತ್ಯವಾಸಿಭಿಃ | ಅಲುಬ್ಧೈರ್ದಾನಶೀಲೈಶ್ಚಸಪ್ತಭಿರ್ಧಾರ್ಯತೇಮಹೀ || || ಟೀ || ಗೋವುಗಳು, ಬ್ರಾಹ್ಮಣರು, ವೇದಗಳು, ಪತಿವ್ರತೆಯರು, ಸತ್ಯವಂತರು, ದಾತರು, ಧಾರಾಳ ಮನಸ್ಸುವುಳ್ಳರು; ಈ ಏಳು ಜನಗಳಿಂದ ಭೂಮಿಯು ಧರಿಸಲ್ಪಡುತ್ತದೆ||೧೫೪||

ಮೂ || ದಾರಾಃಪುತ್ರಾಶ್ಚಭೋಗಾಶ್ಚ ಜೀವಿತಂಧನಯುವ್ವನೆ | ಸರ್ವಾಣಿ

ಮಾನ್ಯಸ್ಥಿರಾಣಿಕೀರ್ತಿರೇಕಾಸ್ಥಿರಾಭುವಿ ॥ ॥ ಟೀ ॥ ಹೆಂಡರು, ಮಕ್ಕಳು ಭೋಗಭಾಗ್ಯಗಳು, ಬದುಕು, ಧನ, ಯವ್ವನ, ಇವೆಲ್ಲವೂ ಅನಿತ್ಯಗಳು, ಕೀರ್ತಿಯೊಂದೇ ಭೂಮಿಯಲ್ಲಿ ಸ್ಥಿರವಾಗಿರ್ಪುದು॥ ॥ ೧೫೫ ॥

ಮೂ ॥ ತೃಣಾಲ್ಲಘುತರಂತೂಲಸ್ತೂಲಾದಪಿಚಯಾಚಕಃ । ವಾಯುನಾಕಿನ್ನನೀತೋಸೌಯಾಚಕಿನ್ಮಾಮಿತಿಚಿಂತಯಾ ॥ ॥ ಟೀ ॥ ತೃಣಕ್ಕಿಂತಲೂ ಅರಳೆ ಲಘುವು, ಅದಕ್ಕಿಂತಲೂ ಯಾಚಕನು ಲಘುವು, ಆದರೆ, ಗಾಳಿಯು ಅರಳೆಯಂತೆ ಯಾಚಕನಂ ಯೇಕೆ ಹಾರಿಸಲಿಲ್ಲವೆಂದರೆ, ಯಾಚಕನಬಳಿಗೆ ಬಂದರೆ ತನ್ನನ್ನೂ ಈವನು ಯಾಚಿಸುವನೆಂದು ಹೆದರಿ ಹಾರಿಸಲಿಲ್ಲ॥ ॥೧೫೬॥

ಮೂ ॥ ದುರ್ಜನೋದೋಷಮಾದತ್ತೆದುರ್ಗಂಧಮಿವಸೂಕರಃ । ಸಜ್ಜನಸ್ಸಾರಮಾದತ್ತೆಹಂಸಕ್ಷೀರಮಿವಾಂಭಸಃ ॥ ॥ ಟೀ ॥ ಹಂದಿಯು ದುರ್ಗಂಧವನ್ನೆ ಹುಡುಕುವಂದದಿ ದುರ್ಜನನು ದೋಷವನ್ನೆ ಹುಡುಕುತ್ತಿರುವನು, ಹಂಸವು ನೀರಿನದೆಸೆಯಿಂದ ಹಾಲಂತೆಗೆಯುವಂದದಿ ಸತ್ಪುರುಷನು ಸಾರವನ್ನೇ ಗ್ರಹಿಸುವನು ॥ ॥ ೧೫೭ ॥

ಮೂ ॥ ಮೂಲಂಭುಜಂಗಾಶ್ಶಿಖರಂವಿಹಂಗಾಶ್ಶಾಖಾಃಪ್ಲವಂಗಾಃಕುಸುಮಾದಿಭೃಂಗಾಃ । ಸಮಾಶ್ರಿತಾಶ್ಚಂದನಶಾಖಿನಾಂಸದಾಪರೋಪಭೋಗಾಯಸತಾಂಶರೀರಂ ॥ ॥ ಟೀ ॥ ಶ್ರೀಗಂಧಮರದಬೇರು ಸರ್ಪಗಳಿಂದಲೂ, ಶಿಖರ ಪಕ್ಷಿಗಳಿಂದಲೂ, ರಂಬೆಗಳು ಕಪಿಗಳಿಂದಲೂ, ಹೂವುಗಳು ತುಂಬಿಗಳಿಂದಲೂ, ಆಶ್ರಯಿಸಲ್ಪಟ್ಟವೆಯಾಗಿ ಅದರಂತೆ ಸತ್ಪುರುಷರ ಶರೀರವೇಪರೋಪಕಾರಕ್ಕಾಗಿರುತ್ತದೆ ॥ ॥ ೧೫೮ ॥

ಮೂ ॥ ಕೊಮಿತ್ರಂದುರ್ಜನಸ್ಯೈಹಕಃಪ್ರಿಯೊವಾರಯೋಷಿತಾಂ । ಕೊಧರ್ಮೊಭ್ರಷ್ಟಶೀಲಾನಾಂಶತ್ರುಸ್ತತ್ವದರ್ಶಿನಾಂ ॥ ॥ ಟೀ ॥ ದುರ್ಜನನಿಗೆ ಮಿತ್ರಯಾವನು, ಸೂಳೆಯರಿಗೆ ಇಷ್ಟನಾವನು, ನೀಚನಿಗೆ ಧರ್ಮವಾವದು ತತ್ವವಂತಿಳಿವಂತಾ ಜ್ಞಾನಿಗೆ ಶತ್ರುವಾವನು, ಅಂದರೆ ದುಷ್ಟನಿಗೆ ಸ್ನೇಹಿತನೇ ಇಲ್ಲ, ಯೆಲ್ಲರಲ್ಲಿಯೂ ದ್ರೋಹಮಾಡುವನು ಸೂಳೆಯರಿಗೆ ಹಣವೇ ಪ್ರಧಾನವಾದದರಿಂದ ಯೆಲ್ಲರೂ ಇಷ್ಟರೂ, ಯೆಲ್ಲರೂ ಅನಿಷ್ಟರು, ನೀಚನು ಸರ್ವ ಅಕೃತ್ಯಗಳನ್ನೂ ಮಾಡುವವನು, ಬ್ರಹ್ಮಜ್ಞಾನಿಯು ಸರ್ವಸಮನಾದಕಾರಣ ಅವನಿಗೆ ಶತ್ರುವಿಲ್ಲವೆಂದು ಭಾವವು ॥ ॥ ೧೫೯॥

ಮೂ ॥ ಕ್ರೋಧೋವೈವಸ್ವತೋರಾಜಾಆಶಾವೈತರಣೀನದೀ । ವಿದ್ಯಾಕಾಮದುಘಾಧೇನುಸ್ಸಂತೋಷೋನಂದನಂವನಂ ॥ ॥ ಟೀ ॥ ಕೋಪವು ಯಮಧರ್ಮರಾಯನು, ಆಶೆಯು ವೈತರಣೀನದಿ, ವಿದ್ಯೆಯು ಕಾಮಧೇನುವು,

ಸಂತೋಷವೇ ನಂದನವನವು, ಅದದರಿಂದ ಯಮಲೋಕ ಸ್ವರ್ಗಲೋಕಗಳೆ ರಡೂ ಮನುಷ್ಯನ ಆತ್ಮದಲ್ಲಿರುತ್ತದೆ ॥ ॥ ೧೬೦ ॥

ಮೂ ॥ ಋಣಪ್ರದಾತಾವೈದ್ಯಶ್ಚಶ್ರೋತ್ರಿಯಸ್ಸಜಲಾನದೀ । ಯತ್ರಚಾಂಗಲಿಕೊನಸ್ತಿನತತ್ರದಿವಸಂವಸೇತ್ ॥ ॥ ಟೀ ॥ ಯಾವ ವೂರಲ್ಲಿ ಸಾಲ ಕೊಡುವವನು, ವೈದ್ಯನು, ಧರ್ಮಶಾಸ್ತ್ರಜ್ಞನಾದ ಬ್ರಾಹ್ಮಣನು, ಸದಾ ನೀರುಳ್ಳ ನದಿಯು, ವಿಷವೈದ್ಯನು, ಯಿವರುಗಳಿಲ್ಲವೋ ಆವೂರಲ್ಲಿ ಒಂದುದಿನವಾದರೂ ವಾಸಮಾಡಕೂಡದು ॥ ॥ ೧೬೧ ॥

ಮೂ ॥ ಕೋತಿಭಾರಸ್ಸಮರ್ಥಾನಾಂಕಿಂದೂರಂವ್ಯವಸಾಯಿನಾಂ । ಕೊವಿದೇಶಸ್ಸವಿದ್ಯಾನಾಂಕಃಪರಃಪ್ರಿಯವಾದಿನಾಂ ॥ ॥ ಟೀ ॥ ಸಮರ್ಥರಿಗೆ ಅತಿಭಾರವಾವದು, ಪ್ರಯತ್ನವುಳ್ಳವರಿಗೆ ದೂರವಾವುದು, ಒಳ್ಳೆ ವಿದ್ಯೆಯುಳ್ಳವನಿಗೆ ಪರದೇಶವಾವುದು, ಹಿತವಾಗಿ ಮಾತಾಡುವವನಿಗೆ ಅನ್ಯನಾವನು॥

ಮೂ ॥ ಸ್ನೇಹವಾಹಾರದಾರೇಷುಮೇಹರೋಗೀಪರಿತ್ಯಜೇತ್ । ಶರ್ಕರಾಂಪಾದಜಿಹ್ವಾಭ್ಯಾಂನೇತ್ರರೋಗೀಪರಿತ್ಯಜೇತ್ ॥ ॥ ಟೀ ॥ ಮೇಹರೋಗವುಳ್ಳವನು ಆಹಾರದಲ್ಲಿಯೂ, ಸ್ತ್ರೀಯರಲ್ಲಿಯೂ, ಸ್ನೇಹವಂ ಬಿಡಬೇಕು, ಸ್ನೇಹವೆಂದರೆ-ಎಣ್ಣೆಯು ಅನುರಾಗವೂ, ಅರ್ಥ ಭೋಜನದಲ್ಲಿ ಯೆಣ್ಣೆಯು, ಸ್ತ್ರೀಯರಲ್ಲಿ ಯಪೇಕ್ಷೆಯೂ ಆಗದು. ನೇತ್ರರೋಗವುಳ್ಳವನು, ಕಾಲಿಂದಲೂ ನಾಲಿಗೆಯಿಂದಲೂ ಶರ್ಕರೆಯಂ ಬಿಡಬೇಕು, ಶರ್ಕರಾ ಅಂದರೆ, ಬೆಣಚೆಕಲ್ಲೂ ಸಕ್ಕರೆಯೂ ಅರ್ಥವು, ಅಂದರೆ—ಕಾಲ್ಗಳಿಂದ ಬೆಣಚೆಕಲ್ಲುಗಳನ್ನು ತುಳಿಯಕೂಡದು, ಸಕ್ಕರೆಯನ್ನು ತಿನ್ನಕೂಡದೆಂದು ಭಾವವು ॥೧೬೩॥

ಮೂ ॥ ಯಸ್ಯಾರ್ಥಾಸ್ತಸ್ಯಮಿತ್ರಾಣಿಯಸ್ಯಾರ್ಥಾಸ್ತಸ್ಯಬಾಂಧವಾಃ । ಯಸ್ಯಾರ್ಥಾಸ್ಸಪುಮಾನ್‌ಪೂಜ್ಯೋಯಸ್ಯಾರ್ಥಾಸ್ಸಚಪಂಡಿತಃ ॥ ॥ ಟೀ ॥ ಯಾವನು ಧನವಂತನೋ ಅವನಿಗೆ ಬಹ ಜನ ಸ್ನೇಹಿತರಾಗುವರು, ಅನೇಕರು ಬಂಧುಗಳಾಗುವರು, ಅವನೇ ಪೂಜ್ಯನಾಗುವನು, ಅವನೇ ಪಂಡಿತನಾಗುವನು, ಅದದರಿಂದ ಸರ್ವವೂ ಹಣದಿಂದಲೇ ಯುಂಟಾಗುತ್ತದೆಂದು ಭಾವವು ॥

ಮೂ ॥ ಕೃತೇಚರೇಣುಕಾಮೃತ್ಯುಸ್ತ್ರೇತಾಯಾಂಜಾನಕೀತಥಾ । ದ್ವಾಪರೇದ್ರೌಪದೀಮೃತ್ಯುಃಕಲೌಮೃತ್ಯುರ್ಗೃಹೆಗೃಹೆ॥ ॥ಟೀ.॥ ಕೃತಯುಗದಲ್ಲಿ ರೇಣುಕೆಯು ಮೃತ್ಯುವು, ತ್ರೇತಾಯುಗದಲ್ಲಿ ಸೀತಾದೇವಿಯು ಮೃತ್ಯುವು, ದ್ವಾಪರದಲ್ಲಿ ದ್ರೌಪದಿಯು ಮೃತ್ಯುವು, ಕಲಿಯುಗದಲ್ಲಾದರೋ ಮನೆ ಮನೆಗೂ ಮೃತ್ಯುರೂಪವಾದ ಹೆಂಗಸರಿದ್ದಾರೆ. ಅಂದರೆ, ಕೃತಯುಗದಲ್ಲಿ ಪರಶುರಾಮನು ಭೂಮಿಯಲ್ಲಿ ಇಪ್ಪತ್ತೊಂದುಸಾರಿ ಸಕಲ ಕ್ಷತ್ರಿಯರನ್ನು ಸಂಹ

ರಿಸಿದ್ದಕ್ಕೆ ರೇಣುಕೆ ಕಾರಣವಾದಳು. ತ್ರೇತೆಯಲ್ಲಿ ಸೀತೆಗೋಸ್ಕರ ಸಕಲ ರಾಕ್ಷಸರನಾಶ ಉಂಟಾಯಿತು. ದ್ವಾಪರದಲ್ಲಿ ದ್ರೌಪದಿಗೋಸ್ಕರ ಹದಿನೆಂಟು ಅಕ್ಷೋಹಿಣಿಯು ನಾಶವನ್ನೈದಿತು ಎಂದು ಭಾವವು || ||೧೬೫||

ಮೂ || ಕಿಂಕ್ರೂರಂಫಣಿಹೃದಯಂಪುನರಪಿಕಿಂಕ್ರೂರಮಂಗನಾಹೃದಯಂ | ಕ್ರೂರಾತ್ಕ್ರೂರತರಂಕಿಂಪತಿಸುತಧನಹೀನಮಂಗನಾಹೃದಯಂ || ಟೀ || ಕ್ರೂರವಾವದು ಆವದೆಂದರೆ ಸರ್ಪಗಳ ಹೃದಯವು, ಅದಕ್ಕಿಂತಲೂ ಕ್ರೂರವು ಆವದಂದರೆ ಹೆಂಗಸರ ಮನಸ್ಸು, ಎಲ್ಲಕ್ಕಿಂತಲೂ ಕ್ರೂರವಾವದಂದರೆ, ಗಂಡನು ಮಕ್ಕಳೂ ಧನವೂ ಇಲ್ಲದ ಹೆಂಗಸರ ಹೃದಯವು ||೧೬೬||

ಮೂ || ಚಂದನಂಶೀತಲಂಲೋಕೆಚಂದನಾದಪಿಚಂದ್ರಮಾಃ | ತಾಭ್ಯಾಂಚಶೀತಲತಮಂಸಾಧೂನಾಂಹೃದಯಂವಿದುಃ || || ಟೀ || ಲೋಕದೊಳು ಚಂದನವು ಶೀತಲವು, ಅದಕ್ಕಿಂತಲೂ ಚಂದ್ರನು ಶೀತಲನು, ಅವೆರಡಕ್ಕಿಂತಲೂ ಸತ್ಪುರುಷರ ಮನಸ್ಸು ಶೀತಲವಾಗಿಹುದು || ||೧೬೭||

ಮೂ|| ತೀಕ್ಷ್ಣೋವಹ್ನಿಸ್ತತಸ್ತೀಕ್ಷ್ಣೋಗ್ರೀಷ್ಮಕಾಲೆದಿವಾಕರಃ | ತಾಭ್ಯಾಂತೀಕ್ಷ್ಣತಮಂಮನ್ಯೆದುರ್ಜನಾನಾಂಹಿಭಾಷಿತಂ || || ಟೀ || ಅಗ್ನಿಯು ತೀಕ್ಷ್ಣವು, ಆದಕ್ಕಿಂತಲೂ ಗ್ರೀಷ್ಮಕಾಲದ ಸೂರ್ಯನು ತೀಕ್ಷ್ಣನು, ಅವುಗಳಿಗಿಂತಲೂ ದುರ್ಜನರ ಮಾತುಗಳು ತೀಕ್ಷ್ಣಗಳು || ||೧೬೮||

ಮೂ || ನವಿಷೇಣನಶಸ್ತ್ರೇಣನಾಗ್ನಿನಾನಚಮೃತ್ಯುನಾ | ಅಪ್ರತೀಕಾರಪೌರುಷ್ಯಾತ್ ಸ್ತ್ರೀಭಿರೆವಸ್ತ್ರಿಯಃಕೃತಾಃ || || ಟೀ || ಬ್ರಹ್ಮದೇವರು ಹೆಂಗಸರನ್ನು ವಿಷದಿಂದಲೂ, ಶಸ್ತ್ರದಿಂದಲೂ, ಅಗ್ನಿಯಿಂದಲೂ, ಮೃತ್ಯುವಿಂದಲೂ, ಮಾಡಿದನೆಂದು ಹೇಳಲಾಗದು. ಯಾಕಂದರೆ, ಅವುಗಳ ವೇಗಕ್ಕೆ ಪ್ರತಿಕ್ರಿಯೆಯುಂಟು, ಇವರಿಗೆ ಪ್ರತಿಕ್ರಿಯೆ ಇಲ್ಲದ್ದರಿಂದ ಸ್ತ್ರೀಗಳಿಂದಲೇ ಸ್ತ್ರೀಯರನ್ನು ಮಾಡಿದನೆಂದು ಹೇಳಬೇಕು || ||೧೬೯||

ಮೂ || ಮಧುರಂಮಧುಮೃದ್ವೀಕಾಮಧುರಾಚತತಯೊಸ್ಸಿತಾ | ತಾಭ್ಯಶ್ಚಮಧುರಂಲೋಕೆಸಜ್ಜನಾನಾಂಸುಭಾಷಿತಂ || || ಟೀ || ಜೇನು ಮಧುರವು, ಅದಕ್ಕಿಂತಲೂ ದ್ರಾಕ್ಷೆಯು, ಅದಕ್ಕಿಂತಲೂ ಸಕ್ಕರೆ ಮಧುರವು, ಅವೆಲ್ಲಕ್ಕಿಂತಲೂ ಸತ್ಪುರುಷರ ವಚನಗಳು ಮಧುರವಾದವು || ||೧೭೦||

ಮೂ || ಕಟುನಿಂಬಃಕಟುಸ್ತುಂಬೀವಿಶಾಲಾಯಾಃಫಲಂಕಟು | ತೆಭ್ಯಃಕಟುತಮಂಲೋಕೆದುರ್ಜನಾನಾಂಹಿಭಾಷಿತಂ || || ಟೀ || ಬೇವು ಕಹಿ, ಹುಚ್ಚುಸೋರೆ ಕಹಿ, ಹಾವುಮೆಕ್ಕೆಹಣ್ಣು ಕಹಿಯು, ಅವೆಲ್ಲಕ್ಕಿಂತಲೂ ದುರ್ಜನರ ಮಾತು ಕಹಿಯಾಗಿಹುದು || ||೧೭೧||

ಮೂ || ಅಹಮೇವಗುರುಸ್ಸುದಾರುಣಾನಾಮಿತಿಹಾಲಾಹಲಮಾಸ್ಮತಾತದೃಪ್ಯಃ। ನನುಸಂತಿಭವಾದೃಶಾನಿಭೂಯೋಭುವನೇಸ್ಮಿನ್ವಚನಾನಿದುರ್ಜನಾನಾಂ। ಟೀ|| ಎಲೈ ವಿಷವೇ ಲೋಕದೊಳು ಕ್ರೂರರಿಗೆಲ್ಲಾ ನಾನೇ ಶ್ರೇಷ್ಠನೆಂದು ಗರ್ವಪಡಬೇಡ, ನಿನಗೆ ಸಮಾನಗಳಾಗಿಯಾದರೂ, ಅಥವಾ ಅಧಿಕಗಳಾಗಿಯಾದರೂ ಇರುವಂಥಾ ದುರ್ಜನಗಳ ಮಾತುಗಳು ಬಹಳವಿವೇ ಅಂದರೆ, ದುಷ್ಟರ ಮಾತುಗಳು ಬಹಳ ಕ್ರೂರಗಳಾಗಿಹವೆಂದು ಭಾವವು ||೧೨೨||

ಮೂ || ಅಜ್ಞಸ್ಸುಖಮಾರಾಧ್ಯಸ್ಸುಖತರಮಾರಾಧ್ಯತೇವಿಶೇಷಜ್ಞಃ । ಜ್ಞಾನಲವದುರ್ವಿದಗ್ಧಂಬ್ರಹ್ಮಾಪಿನರಂನರಂಜಯತಿ || || ಟೀ || ಮೂಢನನ್ನು ಸುಲಭದಿಂ ತೃಪ್ತಿಪಡಿಸಬಹುದು. ಚನ್ನಾಗಿ ತಿಳಿದವನನ್ನು ಅತ್ಯಂತಸುಲಭವಾಗಿ ಸಂತುಷ್ಟಪಡಿಸಬಹುದು. ತಿಳಿದು ತಿಳಿಯದವನನ್ನು ಸಂತುಷ್ಟನ ಮಾಡುವದಕ್ಕೆ ಬ್ರಹ್ಮದೇವನಿಂದಲೂ ಆಗದು || ||೧೨೩||

ಮೂ || ಯವ್ವನಂದ್ರವ್ಯಸಂಪತ್ತಿಃಪ್ರಭುತ್ವಮವಿವೇಕಿತಾ । ಏಕೈಕಮಪ್ಯನರ್ಥಾಯಕಿಮುಯತ್ರಚತುಷ್ಟಯಂ || || ಟೀ || ಯವ್ವನವು, ಧನವು, ಪ್ರಭುತ್ವವು, ಈ ನಾಲ್ಕರಲ್ಲಿಯೊಂದೊಂದೇ ಮನುಷ್ಯನಂ ಕೆಡಿಸುವದಾಗಿರುತ್ತದೆ. ಈ ನಾಲ್ಕು ಶೇರಿ ಇದ್ದರೆ, ಕೇಳತಕ್ಕದ್ದೇನು || ||೧೨೪||

ಮೂ|| ಬಹೂನಾಮಪ್ಯಸಾರಾಣಾಂಸಮವಾಯೋದುರಾಸದಃ । ತೃಣೈರಾರಭ್ಯತೇರಜ್ಜುಸ್ತೇನನಾಗೋಪಿಬಧ್ಯತೇ || || ಟೀ || ಪ್ರತ್ಯೇಕ ಪ್ರತ್ಯೇಕ ಅಲ್ಪಗಳಾಗಿ ಇದ್ದರೂ ಅಂತಾ ವಿಷಯಗಳು ಅನೇಕಗಳು ಒಂದಾಗಿ ಶೇರಿದರೆ ಅದು ಕಷ್ಟಸಾಧ್ಯವಾಗಿರುತ್ತದೆ. ಇದಕ್ಕೆ ನಿದರ್ಶನವೇನಂದರೆ, ಸಂಣ ಸಂಣ ನಾರುಗಳಂ ಶೇರಿಸಿ ಹೊಸಿಯಲ್ಪಟ್ಟ ಹಗ್ಗವು ಆನೆಯನ್ನು ಕಟ್ಟುವದಕ್ಕೆ ಉಪಯೋಗಿಸುತ್ತದೆ. ಆಗದರಿಂದ ಯಾವದನ್ನಾದರೂ, ಅಲ್ಪವೆಂದೆಣಿಸಿ ಅಲಕ್ಷ್ಯಮಾಡಲಾಗದು || ||೧೨೫||

ಮೂ || ಕರ್ಣಯೋಶ್ಚಾಪಿದಂತಾನಾಂತೃಣಮಪ್ಯುಪಯುಜ್ಯತೇ । ಕಂಡೂಯನೇಘರ್ಷಣೇಚಕಿನ್ನುವಾಕ್ಪಾಣಿಮಾನ್ನರಃ || || ಟೀ || ಕಿವಿಗಳಲ್ಲಿ ತೀಟೆ ತೀರಿಸುವದಕ್ಕೂ, ಹಲ್ಲುಗಳ ಸಂದಿನಲ್ಲಿ ಚುಚ್ಚುವದಕ್ಕೂ, ಸಹ ಮನುಷ್ಯನಿಗೆ ತೃಣವು ಸಹ ಬೇಕಾಗಿ ಇರುತ್ತದೆ. ಬಾಯಿ ಕೈಗಳುಳ್ಳ ಮನುಷ್ಯನುಪಯೋಗಿಸುವ ವಿಷಯದಲ್ಲಿ ಕೇಳತಕ್ಕದ್ದೇನು || ||೧೨೬||

ಮೂ, || ನೀಹಾರವತ್ಸಮುಪಯಾತಿಸತಾಂಹಿಲಕ್ಷ್ಮೀಸ್ಸಂವರ್ಧತೇಶಿಖರಿವಚ್ಛವತಿಸ್ಥಿರಾಚ । ಆಯಾತಿಪರ್ವತವದಪ್ಯಸತಾಂಚಲಕ್ಷ್ಮೀಃಪ್ರಾಲೇಯವಚ್ಛಚತಿಪಶ್ಯತಏವನಾಶಂ || || ಟೀ || ಸತ್ಪುರುಷರ ಸಂಪತ್ತು ಮಂಜಿನಂತೆ

ಲಘುವಾಗಿ ಒಂದು ಕೇರಿ ವೃದ್ಧಿಹೊಂದಿ ಬೆಟ್ಟದಂತೆವಿಸ್ತಾರವಾಗಿ ಸ್ಥಿರವಾಗಿರ್ಪುದು, ದುಷ್ಟರ ಸಂಪತ್ತು ಪರ್ವತದಂತೆ ಬಂದು ನೋಡುತಲಿದ್ದಾಗಲೇ ಮಂಜಿನಂತೆ ನಾಶವನ್ನೈದುವದು || ||೧೭೭||

ಮೂ|| ಜೀವನಗ್ರಹಣೇನಮ್ರಾಃಗೃಹೀತ್ವಾಪುನರುದ್ಧತಾಃ| ಕಿಂಕನಿಷ್ಠಾಃಕಿಮುಜ್ಯೇಷ್ಠಾಃಘಟೀಯಂತ್ರಸ್ಯದುರ್ಜನಾಃ|| ||ಟೀ|| ಸ್ವಪ್ರಯೋಜನವಂ ಹೊಂದುವದಕ್ಕಾಗಿ ಬಗ್ಗಿ, ಅದು ಸಿಕ್ಕಿದ ಕೂಡಲೇ ಗರ್ವಿಷ್ಠರಾಗುವಂತಾ ದುರ್ಜನರು ಜೀವನವೆಂಬ ನೀರನ್ನು ತೆಗದುಕೊಳ್ಳುವದಕ್ಕೋಸ್ಕರ ತಲೆಬಗ್ಗಿ ಅದಂತೆಗದ ಕೂಡಲೇ ತಲೆಯೆತ್ತಿಕೊಳ್ಳುವ ಪಿತ್ತಗಳಿಗೆ ಸಮ್ಮಂದರೊ ಅಂಣಂದಿರೊ ತಿಳಿಯದು. ಅಂದರೆ, ಪಿತಗಳಂತೆಯೇ ದುರ್ಜನರೆಂದುಭಾವವು ||

ಮೂ|| ಶತೇಷುಜಾಯತೇಶೂರಸ್ಸಹಸ್ರೇಷುಚಪಂಡಿತಃ| ವಕ್ತಾಶತಸಹಸ್ರೇಷುದಾತಾಭವತಿವಾನವಾ || ||ಟೀ|| ನೂರ್ವರಲ್ಲೊಬ್ಬನು ಶೂರನಾಗುವನು, ಸಾವಿರ ಮನುಷ್ಯರಲ್ಲಿಯೊಬ್ಬನು ಪಂಡಿತನಾಗುವನು, ಹತ್ತು ಸಾವಿರ ಜನರಲ್ಲಿಯೊಬ್ಬನು ವಾಕ್ಚಾತುರ್ಯವುಳ್ಳವನಾಗುವನು, ದಾತೃತ್ವವುಳ್ಳವನು ಮಾತ್ರ ಭೂಮಿಯಲ್ಲಿ ಹುಟ್ಟಿ ಇರುವನೋ ಇಲ್ಲವೋ ತಿಳಿಯದು ||೧೭೯||

ಮೂ|| ದಾತುರ್ಮಿತ್ರತ್ವಮಾಯಾಂತಿಶತ್ರವೋಪಿಮನಸ್ವಿನಃ| ಅದಾತಾರಂತ್ಯಜಂತೀಹಬಾಂಧವಾಅಪಿಶತ್ರುವತ್ || ||ಟೀ|| ದಾತೃತ್ವ ಗುಣವುಳ್ಳವನಿಗೆ ಶತ್ರುಗಳೂ ಕೂಡ ಸ್ನೇಹಿತರಾಗುತ್ತಾರೆ. ಲುಬ್ಧನನ್ನು ಬಂಧುಗಳೂ ಕೂಡ ಶತೃವಿನಂತೆ ಬಿಟ್ಟು ಬಿಡುತ್ತಾರೆ || ||೧೮೦||

ಮೂ|| ನವಾಹನೈರ್ನರೂಪೇಣನವಾಸೋಭಿರ್ನಭೂಷಣೈಃ| ವಿಭೂಷ್ಯತೇಪುಮಾನ್ಲೋಕೇವಿದ್ಯಯೈವಹಿಭೂಷ್ಯತೇ|| ||ಟೀ|| ಮನುಷ್ಯನು ವಾಹನಗಳಿಂದಲೂ, ರೂಪದಿಂದಲೂ, ವಸ್ತ್ರಗಳಿಂದಲೂ, ಆಭರಣಗಳಿಂದಲೂ, ಅಲಂಕರಿಸಲ್ಪಡುವದಿಲ್ಲ. ವಿದ್ಯೆಯೊಂದರಿಂದಲೇ ಭೂಷಿಸಲ್ಪಡುತ್ತಾನೆ ||೧೮೧||

ಮೂ|| ಚಿರಂತನೇಭ್ಯೋಗ್ರಂಥೇಭ್ಯೋನೀತಿವಾಕ್ಯಾನ್ಯನೇಕಶಃ| ಸಂಗೃಹ್ಯರಚಿತೋಜೀಯಾನ್ನೀತೀನಾಂಸಾರಸಂಗ್ರಹಃ|| ||ಟೀ|| ಪುರಾತನ ಗ್ರಂಥಗಳ ದೆಸೆಯಿಂದ ಅನೇಕ ಪ್ರಕರಣಗಳ ನೀತಿ ವಾಕ್ಯಗಳನ್ನು ಸಂಗ್ರಹಿಸಿ ಮಾಡಲ್ಪಟ್ಟ ನೀತಿಸಾರ ಸಂಗ್ರಹವೆಂಬ ಈ ಗ್ರಂಥವು ಸರ್ವಜನಗಳಿಂದಲೂ ಕೊಂಡಾಡಲ್ಪಡಲಿ || || ಓಂ–ಶ್ರೀಯೈನಮಃ || ||೧೮೨||

ಇತಿ–ನೀತಿಸಾರಸಂಗ್ರಹ ಸ್ಸಮಾಪ್ತಃ.